# ಅಧ್ಯಾತ್ಮಪ್ರಕಾಶ

ಸಂಸ್ಥಾಪಕರು: ಪ. ಪ. ಶ್ರೀಶ್ರೀಸಚ್ಚಿದಾನಂದೇಂದ್ರಸರಸ್ವತೀಸ್ವಾಮಿಗಳು

'एतज्ज्ञेयं नित्यमेवात्मसंस्थं नातःपरं वेदितव्यं हि किंचित्'

ಸಂಪುಟ ೫೩ ಡಿಸೆಂಬರ್ ೧೯೮೩ ಸಂಚಿಕೆ ೪

## ವಿಷಯಗಳು


| | |
|---|---|
| ಷೋಡಶಕಲವಿದ್ಯೆ-೨ | ೭೩ |
| ಅಧ್ಯಾತ್ಮಸಂದೇಶ | ೭೪ |
| ಸಾಮಾನ್ಯನೀತಿ | ೭೮ |
| ಸತ್ಯಕಾಮನ ಪತ್ರಗಳು | ೭೯ |
| ಅರಿಸಿದ ಅರಳುಮೊಗ್ಗುಗಳು | ೮೧ |
| ವರುಣನ ಗರ್ವಭಂಗ | ೮೨ |
| ಸಚ್ಚಿದಾನಂದಮನನ | ೮೩ |
| ತ್ವೇಷಂ ಹ್ಯಸ್ಯ ಸ್ಥವಿರಸ್ಯ ನಾಮ | ೮೪ |
| ನಿರಶನಾರ್ಕವಾರವ್ರತ-೧ | ೮೮ |
| ಜಿಜ್ಞಾಸುಗಳ ಪ್ರಶ್ನೆಗಳಿಗೆ ಉತ್ತರಗಳು | ೯೨ |
| ದೀಪಾವಳಿ-ಗೀತಾಜಯಂತಿ | ೯೪ |
| ಕೂಡಿಹ ಕನ್ನಡನಾಡು | ೯೬ |
| The Unique Teaching of Shankara | 25–32 |
| ಅಧ್ಯಾತ್ಮರಾಮಾಯಣ (ಸ್ವತಂತ್ರ ಪುಟಗಳು) | ೫೦೭-೫೧೪ |


ಪತ್ರಿಕೆಯ ಚಂದಾ

ವರ್ಷಕ್ಕೆ

ರೂ. ೧೫-೦೦

ಪೋಷಕರಿಗೆ ರೂ. ೨೦-೦೦

ಮಹಾಪೋಷಕರಿಗೆ ರೂ. ೧೫೧-೦೦




ಹೊಸವರ್ಷಕ್ಕೆ ಚಂದಾಹಣವನ್ನು ಈಗಲೆ ಕಳುಹಿಸಿರಿ.

ಪತ್ರಿಕೆಯ ಸಂಪಾದಕ ಮತ್ತು ಪ್ರಕಾಶಕ :

ಅಧ್ಯಾತ್ಮವಿದ್ಯಾಪ್ರವೀಣ ಹೆಚ್. ಎಸ್. ಲಕ್ಷ್ಮೀನರಸಿಂಹಮೂರ್ತಿ,

ಅಧ್ಯಾತ್ಮಪ್ರಕಾಶಕಾರ್ಯಾಲಯ, ಹೊಳೆನರಸೀಪುರ-573211

December 1983

# ಕಾರ್ಯಾಲಯದ ಸುದ್ದಿ

**ಭಗವದ್ಗೀತಾ ಜಯಂತಿ :** ತಾ॥ 16-12-1983ನೆಯ ಮಾರ್ಗಶಿರ ಶುಕ್ಲ ಏಕಾದಶೀ ಶುಕ್ರವಾರದಿಂದ ಮೂರು ದಿನಗಳ ಕಾಲ ಗೀತಾಜಯಂತಿಯ ಪ್ರಯುಕ್ತ ಕಾರ್ಯಾಲಯದಲ್ಲಿ ಗೀತಾಭಾಷ್ಯಪ್ರವಚನ, ಪಾರಾಯಣ, ಉಪನ್ಯಾಸಗಳು ಬೆಳಗ್ಗೆ ಹಾಗೂ ಸಂಜೆ ವೇಳೆಗಳಲ್ಲಿ ನಡೆಯುವವು. 19ನೇ ತಾ॥ ಸೋಮವಾರ ಮಂಗಳವಾಗುವದು. ಸರ್ವರಿಗೂ ಸುಸ್ವಾಗತ.

**ಶ್ರೀ ಬ್ರಹ್ಮಚೈತನ್ಯಾರಾಧನೆ :** ತಾ॥ 26-12-1983ನೆಯ ಮಾರ್ಗಶಿರ ಬಹುಳ ಸಪ್ತಮೀ ಸೋಮವಾರದಿಂದ ಮೂರು ದಿನಗಳಕಾಲ ಶ್ರೀ ಬ್ರಹ್ಮಚೈತನ್ಯಾರಾಧನೆ ಪ್ರಯುಕ್ತ ಭಾಗವತ ಪ್ರವಚನ ಉಪನ್ಯಾಸಾದಿಗಳೂ 29ನೇ ತಾ॥ ಗುರುವಾರ ಮಂಗಳವೂ ನಡೆಯಲಿದೆ. ತಾ॥ 27-12-83 ರಂದು ಬ್ರಹ್ಮೀಭೂತ ಶ್ರೀಶ್ರೀಸಚ್ಚಿದಾನಂದೇಂದ್ರಸರಸ್ವತೀಮಹಾಸ್ವಾಮಿಗಳವರ ೧೦೪ನೆಯ ಜಯಂತ್ಯುತ್ಸವವೂ ನಡೆಯುತ್ತದೆ.

**ಗ್ರಂಥಮುದ್ರಣ :** (೧) ಬೃಹದಾರಣ್ಯಕೋಪನಿಷದ್ಭಾಷ್ಯ-೧ನೆಯ ಭಾಗದ ಮುದ್ರಣವನ್ನು 31-10-83ನೇ ಸೋಮವಾರ ಪ್ರಾರಂಭಿಸಲಾಗಿದ್ದು ಈವರೆಗೆ ೩೨ ಪುಟಗಳು ಮುದ್ರಣವಾಗಿವೆ. (೨) 'ಶಂಕರಭಗವತ್ಪಾದರ ಸರ್ವಸಮ್ಮತೋಪದೇಶಗಳು' ಎಂಬ ಗ್ರಂಥದ ಮುದ್ರಣವೂ ಪ್ರಾರಂಭವಾಗಿದ್ದು ಈವರೆಗೆ ೪೦ ಪುಟಗಳಾಗಿವೆ. ಗ್ರಂಥಪ್ರಕಟನೆಗೆ ಸಹಾಯ ಮಾಡುವವರಿಗೆ ಇದು ಸುಸಮಯವಾಗಿದೆ. ಬೃಹದಾರಣ್ಯಕೋಪನಿಷದ್ಭಾಷ್ಯ-೨ನೆಯ ಭಾಗದ ಮುದ್ರಣವನ್ನು ಬೆಂಗಳೂರಿನಲ್ಲಿ ಮಾಡಿಸಲು ಪ್ರಯತ್ನವನ್ನು ಮಾಡಿತ್ತು. ಇದರ ಖರ್ಚು ಐವತ್ತೇಳುಸಾವಿರರೂಪಾಯಿಗಳಿಗೂ (Rs. 57,000) ಮೀರಿ ಆಗಬಹುದೆಂತ ಅಂದಾಜಾಯಿತು. ಪ್ರಕಟನನಿಧಿಯಲ್ಲಿ ಈಗ ಅಷ್ಟೊಂದು ಹಣ ಶಿಲ್ಕು ಇಲ್ಲದಿರುವದರಿಂದ ಈ ಕೆಲಸವನ್ನು ಕೆಲವು ಕಾಲದವರೆಗೆ ಅನಿವಾರ್ಯವಾಗಿ ಮುಂದೂಡಬೇಕಾಗಿದೆ.

**ಸಂಪಾದಕರು :** (೧) ತಾ॥ 2-11-83 ಹಾಗೂ 3-11-83 ರಂದು ಶೃಂಗೇರಿ ಜಗದ್ಗುರುಗಳ ವರ್ಧಂತ್ಯುತ್ಸವದ ಅಂಗವಾಗಿ ಹಾಸನದ ಶಂಕರಮಠದಲ್ಲಿ ರಾವ್‌ಬಹದ್ದೂರ್ ನಂಜುಂಡಯ್ಯನವರ ಹೆಸರಿನ ದತ್ತಿ ಆಶ್ರಯದಲ್ಲಿ ಏರ್ಪಡಿಸಿದ್ದ ಎರಡು ಉಪನ್ಯಾಸಗಳನ್ನು ನೆರವೇರಿಸಿದರು. (೨) ಶಿವಮೊಗ್ಗ ಕಾರ್ಯಕ್ರಮವು ಪೂರೈಸಿದ ಅನಂತರ ಡಿಸೆಂಬರ್ ಮೂರನೆಯ ವಾರದಲ್ಲಿ ಸಾಧ್ಯವಾದರೆ ಪರಸ್ಥಳಕ್ಕೆ ಹೋಗಿಬರುವ ಆಲೋಚನೆಯುಳ್ಳವರಾಗಿರುತ್ತಾರೆ. ಉಳಿದ ಸಮಯದಲ್ಲಿ ಸ್ಥಳದಲ್ಲಿರುತ್ತಾರೆ.

**ಹಳೆಯ ಮಹಾಪೋಷಕರುಗಳು :** ರೂ. ೧೦೧ ನ್ನು ಪಾವತಿಮಾಡಿ ಮಹಾಪೋಷಕರಾಗಿ ಮುಂದುವರೆಯುತ್ತಿರುವ ೬೫೦ ಜನರಲ್ಲಿ ಸುಮಾರು ೧೦೭ ಜನರು ಮಾತ್ರ ರೂ. ೫೧ನ್ನು ಹೆಚ್ಚಿಗೆ ಕೊಟ್ಟು ಪ್ರೋತ್ಸಾಹಿಸಿದ್ದಾರೆ. ದಯಮಾಡಿ ಉಳಿದ ಮಹನೀಯರುಗಳೂ ಹೆಚ್ಚಿನ ಹಣವನ್ನು ಪಾವತಿಮಾಡಿದಲ್ಲಿ ತುಂಬ ಉಪಕಾರವಾಗಲಿದೆ.

**ಪತ್ರಿಕೆ :** 1983ನೆಯ ನವೆಂಬರ್ ಆಖೈರುವರೆಗೆ ಸಾಮಾನ್ಯಚಂದಾದಾರರು ೪೭೮ ಜನರು ಆಗಿರುತ್ತಾರೆ. ಇನ್ನೂ ೧೫೦ ಜನರು ಚಂದಾದಾರರಾಗಿ ಆಗಲು ಅವಕಾಶವಿದೆ. ಮಹಾಜನರು ಪ್ರೋತ್ಸಾಹಿಸಬೇಕಾಗಿ ಬೇಡಿವೆ.

———

॥ ಜಯ ಭಗವದ್ಗೀತೇ ॥

**ಸರ್ವಧರ್ಮಾನ್ ಪರಿತ್ಯಜ್ಯ ಮಾಮೇಕಂ ಶರಣಂ ವ್ರಜ ।**
**ಅಹಂ ತ್ವಾ ಸರ್ವಪಾಪೇಭ್ಯೋ ಮೋಕ್ಷಯಿಷ್ಯಾಮಿ ಮಾ ಶುಚಃ ॥**

**ಅಧ್ಯಾತ್ಮಪ್ರಕಾಶಕಾರ್ಯಾಲಯ, ಬೆಂಗಳೂರು ಶಾಖೆ,**
**ನಂ. 68, 2ನೆಯ ಬ್ಲಾಕ್, ತ್ಯಾಗರಾಜನಗರ, ಬೆಂಗಳೂರು-560028.**

ಸಂಸ್ಥಾಪಕರು : **ಪ. ಪ. ಶ್ರೀಶ್ರೀಸಚ್ಚಿದಾನಂದೇಂದ್ರಸರಸ್ವತೀಮಹಾಸ್ವಾಮಿಗಳವರು.**

# ಶ್ರೀಮದ್ಭಗವದ್ಗೀತಾಜಯಂತೀಸಪ್ತಾಹ
# ಆಹ್ವಾನ ಪತ್ರಿಕಾ

ಇದೇ ಶ್ರೀಮತ್ ರುಧಿರೋದ್ಗಾರಿನಾಮಸಂವತ್ಸರದ ಮಾರ್ಗಶೀರ್ಷ ಶುದ್ಧ ಏಕಾದಶೀ ತಾ॥ 16-12-1983ನೇ ಶುಕ್ರವಾರದಿಂದ ಕೃಷ್ಣ ತೃತೀಯಾ ತಾ॥ 22-12-1983ನೇ ಗುರುವಾರದವರೆಗೆ ಒಂದು ವಾರದ ಕಾಲ ಈ ಮೇಲಿನ ವಿಳಾಸದಲ್ಲಿ

**ಶ್ರೀಮದ್ಭಗವದ್ಗೀತಾಜಯಂತೀಮಹೋತ್ಸವವು ನಡೆಯುತ್ತದೆ.**

ಶ್ರೀಶ್ರೀಗಳವರ ಸಾಕ್ಷಾತ್‌ಶಿಷ್ಯರೂ ಶಾಖಾಕಾರ್ಯಾಲಯದ ಪಂಡಿತರೂ ಆಗಿರುವ **"ಅಧ್ಯಾತ್ಮವಿದ್ಯಾಪ್ರವೀಣ" "ವೇದವಿದ್ಯಾಭೂಷಣ" ವೇ॥ ಬ್ರ॥ ಶ್ರೀ॥ ಕೆ. ಜಿ. ಸುಬ್ರಾಯಶರ್ಮಾ**- ರವರಿಂದ ಪ್ರತಿದಿನ ಬೆಳಗ್ಗೆ 8-45 ರಿಂದ 9-45 ರ:ವರೆಗೆ **ಗೀತಾ ಶಾಂಕರಭಾಷ್ಯಪ್ರವಚನಗಳೂ** ಸಾಯಂಕಾಲ 5ರಿಂದ 6ರ ವರೆಗೆ **ಗೀತೋಪನ್ಯಾಸಗಳೂ** ಹಿಂದುಗಡೆಯಲ್ಲಿ ತಿಳಿಸಿರುವಂತೆ ನಡೆಯುತ್ತವೆ.

**ಸರ್ವರಿಗೂ ಆದರದ ಸುಸ್ವಾಗತ.**

ಬೆಂಗಳೂರು-560028
ದಿನಾಂಕ ॥ 8-12-83.

**ಕೆ. ಜಿ. ಸುಬ್ರಾಯಶರ್ಮಾ,**
ಕಾರ್ಯದರ್ಶಿ.

# ಕಾರ್ಯಕ್ರಮಗಳ ವಿವರ

---

| ಬೆಳಗ್ಗೆ 8-45ರಿಂದ 9-45 | ಸಾಯಂಕಾಲ 5ರಿಂದ 6ರ ವರೆಗೆ |
|---|---|
| (ಗೀತಾಶಾಂಕರಭಾಷ್ಯಪ್ರವಚನಗಳು) | (ಗೀತೋಪನ್ಯಾಸಗಳು) |
| 16-12-1983ನೇ ಶುಕ್ರವಾರ | |
| ಅಂತವಂತ ಇಮೇ ದೇಹಾಃ ೨-೧೮. | **ಗೀತೆಯ ಸ್ಥಾನ** |
| 17-12-1983ನೇ ಶನಿವಾರ | |
| ತಸ್ಯ ಕಾರ್ಯಂ ನ ವಿದ್ಯತೇ ೩-೧೭. | **ಗೀತೆಯೂ ಉಪನಿಷತ್ತುಗಳೂ** |
| 18-12-1983ನೇ ಭಾನುವಾರ | |
| ಕರ್ಮಭಿರ್ನ ಸ ಬಧ್ಯತೇ ೪-೧೪. | **ಗೀತೆಯಲ್ಲಿ ಜ್ಞಾನೋಪದೇಶ** |
| 19-12-1983ನೇ ಸೋಮವಾರ | |
| ನ ತೇಷು ರಮತೇ ಬುಧಃ ೫-೨೨. | **ಗೀತಾಚಾರ್ಯನ ಸತ್ಯಪ್ರತಿಜ್ಞೆಗಳು** |
| 20-12-1983ನೇ ಮಂಗಳವಾರ | |
| ಸ ಚ ಮೇ ನ ಪ್ರಣಶ್ಯತಿ ೬-೩೦. | **ಗೀತಾಚಾರ್ಯನ ಹಿತೋಪದೇಶಗಳು** |
| 21-12-1983ನೇ ಬುಧವಾರ | |
| ಮಾಯಾಮೇತಾಂ ತರಂತಿ ತೇ ೭-೧೪. | **ಗೀತೆಯೂ ಇತರ ದರ್ಶನಗಳೂ** |
| 22-12-1983ನೇ ಗುರುವಾರ | |
| ಮಾಮೇವೈಷ್ಯಸಿ ೧೮-೬೫. | **ಗೀತಾಸಾರಸರ್ವಸ್ವ** |

**ತಮಗೆಲ್ಲ ಪ್ರೀತಿಯ ಸುಸ್ವಾಗತ.**

---

॥ ಓಮ್ ॥

# ಅಧ್ಯಾತ್ಮಪ್ರಕಾಶ

ಸಂಪುಟ ೫೩]  ವರ್ಷಕ್ಕೆ ರೂ. ೧೫–೦೦ ;  ಬಿಡಿ ಸಂಚಿಕೆಗೆ : ರೂ. ೧.೨೫  [ಸಂಚಿಕೆ ೪

ಡಿಸೆಂಬರ್–1983

( ಶ್ರೀ ರುಧಿರೋದ್ಗಾರಿಸಂವತ್ಸರದ ಮಾರ್ಗಶಿರ )

## ಷೋಡಶಕಲವಿದ್ಯೆ–೨

**ಓಂ ॥ ಶ್ರುತಂ ಹ್ಯೇವ ಮೇ ಭಗವದ್ದೃಶೇಭ್ಯಃ ಆಚಾರ್ಯಾದ್ಧೈವ ವಿದ್ಯಾ ವಿದಿತಾ ಸಾಧಿಷ್ಠಂ ಪ್ರಾಪದಿತಿ ತಸ್ಮೈ ಹೈತದೇವೋವಾಚ ಅತ್ರ ಹ ನ ಕಿಂಚನ ವೀಯಾಯ ॥**

—ಛಾಂದೋಗ್ಯೋಪನಿಷತ್ತು ೪–೯–೩.

**ಭಾವಾರ್ಥ :–** ( ಸತ್ಯಕಾಮನು ) 'ಆಚಾರ್ಯನಿಂದಲೇ ಅರಿತುಕೊಂಡ ವಿದ್ಯೆಯು ಸಾಧಿಷ್ಠವನ್ನು ಹೊಂದುತ್ತದೆ–ಎಂದು ಭಗವಂತನಂಥವರಿಂದ ಕೇಳಿದ್ದೇ ನನ್ನಲ್ಲಿದೆ' (ಎಂದನು.) ಅವನಿಗೆ ಇದನ್ನೇ ಆಚಾರ್ಯನು ಹೇಳಿಕೊಟ್ಟನು. ಇದರಲ್ಲಿ ಒಂದಿಷ್ಟೂ ಹೋಗಲಿಲ್ಲ.

[ ಗೋಸೇವೆಯ ಪ್ರಭಾವದಿಂದ ಷೋಡಶಕಲವಿದ್ಯೆಯನ್ನು ದೇವತೆಗಳ ಮೂಲಕವೇ ಪಡೆದುಕೊಂಡ ಸತ್ಯಕಾಮನು ಗುರುವಿನಿಂದ ಸರಿಯೆನಿಸಿಕೊಂಡಲ್ಲದೆ ಅದು ಪೂರ್ಣವಾಗಲಾರದೆಂದು ತಿಳಿದು ಗುರುವಿನ ಬಳಿಗೆ ಬಂದು ಅದೇ ಉಪದೇಶಗಳನ್ನೇ ಮತ್ತೆ ಪಡೆದು ಕೃತಕೃತ್ಯನಾದನು– ಎಂದಭಿಪ್ರಾಯ. ]

———

# ಅಧ್ಯಾತ್ಮಸಂದೇಶ

(ಗುರುಕಿಂಕರ)

## ಆಚಾರ್ಯೋಪದೇಶದ ಮಹತ್ತ್ವ

ಸತ್ಯಕಾಮನ ಕಥೆಯನ್ನು ಈಗ ಮುಂದುವರಿಸೋಣ. ಷೋಡಶಕಲವಿದ್ಯೆಯ ನಾಲ್ಕನೆಯ ಒಂದು ಭಾಗವನ್ನು ಉಪದೇಶಮಾಡಿದ ಎತ್ತು ಕಡೆಯಲ್ಲಿ 'ಸತ್ಯ ಕಾಮನೆ, ನಿನಗೆ ಮುಂದಿನ ಪಾದ (ಕಾಲುಭಾಗ)ವನ್ನು ಅಗ್ನಿಯು ಹೇಳಿಕೊಡಲಿರುವನು' ಎಂದಿತು. ಅವನು ಗೋವುಗಳನ್ನು ಹೊಡೆದುಕೊಂಡು ಎರಡನೆಯ ದಿನವೂ ಗುರುಗಳ ಮನೆಯ ಕಡೆಗೆ ಪ್ರಯಾಣವನ್ನು ಮುಂದುವರೆಸಿದನು. ಆ ದಿನ ಸಾಯಂ ಕಾಲವಾಗಲು ಗೋವುಗಳನ್ನು ಒಂದು ಕಡೆ ನೆಲೆಗೊಳಿಸಿ ಅಗ್ನಿಯನ್ನು ಹೊತ್ತಿಸಿದನು. ಸಮಿದಾಧಾನವನ್ನು ಮಾಡಿ ಪೂರ್ವಾಭಿಮುಖನಾಗಿ ಕುಳಿತುಕೊಂಡು ಎತ್ತು ಹೇಳಿದ್ದನ್ನು ಸ್ಮರಿಸಿಕೊಳ್ಳುತ್ತಿದ್ದನು. ಆಗ ಅಗ್ನಿಯು ಪ್ರತ್ಯಕ್ಷನಾಗಿ ಸತ್ಯಕಾಮನೆ, ಎಂದು ಕರೆದನು. ಪೂಜ್ಯರೆ, ಇಲ್ಲಿದ್ದೇನೆ-ಎಂದು ಉತ್ತರಕೊಟ್ಟನು. ಆಗ ಅಗ್ನಿ ದೇವನು 'ಸೋಮ್ಯನೆ, ನಿನಗೆ ಬ್ರಹ್ಮದ ಎರಡನೆಯ ಪಾದವನ್ನು ಹೇಳಿಕೊಡುವೆನು' ಎಂದು ಉಪಕ್ರಮಿಸಿ 'ಪೃಥಿವಿ, ಅಂತರಿಕ್ಷ, ದ್ಯುಲೋಕ, ಸಮುದ್ರ-ಎಂಬೀ ನಾಲ್ಕು ಕಲೆಗಳೇ ಬ್ರಹ್ಮದ ಎರಡನೆಯ ಪಾದವು. ಇದನ್ನು 'ಅನಂತವಾನ್' (ಅಂತವಿಲ್ಲದ್ದು) ಎಂದು ಉಪಾಸನೆಮಾಡು'-ಎಂದು ಉಪದೇಶಿಸಿದನು. ಅಗ್ನಿಯು ಪೃಥಿವ್ಯಾದಿಗಳ ಸಂಬಂಧವುಳ್ಳ ದೇವತೆಯಾಗಿರುತ್ತದೆ. ಆದ್ದರಿಂದ ಪೃಥಿವ್ಯಾದಿಗಳ ರೂಪದಲ್ಲಿ ಬ್ರಹ್ಮವನ್ನು ಉಪಾಸನೆಮಾಡು- ಎಂದು ಅದು ಹೇಳಿಕೊಟ್ಟಿತು. ಬ್ರಹ್ಮವು ಸರ್ವವ್ಯಾಪಕವೂ ಸರ್ವಾಂತರ್ಯಾಮಿಯೂ ಆಗಿರುವದು. ಉಪಾಸನೆಗಾಗಿ ಅದನ್ನು ಸ್ವೀಕರಿಸಿದಾಗ ಉಪಾಧಿಗಳ ಮೂಲಕವೇ-ವಿದ್ಯುಚ್ಛಕ್ತಿಯನ್ನು ಬಲ್ಬ್‌ಗಳಲ್ಲಿ ಕಾಣುವಂತೆ- ಕಂಡುಕೊಳ್ಳಬೇಕಾಗಿರುತ್ತದೆ. ಇಲ್ಲಿ ಪೃಥಿವ್ಯಾದಿಗಳನ್ನು ಬ್ರಹ್ಮದ ಪಾದಗಳೆಂದಿರುವದು ಉಪಾಧಿದೃಷ್ಟಿಯಿಂದಲೇ ಆಗಿರುತ್ತದೆ. ಭೂಮಿಯನ್ನು ನಾವು ಚೆನ್ನಾಗಿ ಆಂತರಿಕವಾದ ದೃಷ್ಟಿಯಿಂದ ನೋಡಿದರೆ ಅದು ಜಡವಲ್ಲವೆಂದೂ ದೇವತೆಯೆಂದೂ ತಿಳಿದುಬರುತ್ತದೆ. ನಮಗೆ ಗೊತ್ತಿರುವಂತೆ ಭೂಮಿಯು ಸಾಕಷ್ಟು ವಿಶಾಲವಾಗಿದೆ. ನಾವೆಲ್ಲರೂ ಮನೆ ಮಠ-ಊರುಗಳನ್ನು ನಿರ್ಮಿಸಿಕೊಂಡಮೇಲೂ ಭೂಮಿಯು ಇನ್ನೂ ಬೇಕಾದಷ್ಟು ಉಳಿದಿದೆ. ಈಗಲೂ ಭೂಮಿಯ ಕೆಲವು ಗಹನವಾದ ಭಾಗಗಳಿಗೆ ಮನುಷ್ಯರು ಹೋಗಲು ಸಾಧ್ಯವಾಗಿಲ್ಲ. ಇನ್ನು ಭೂಗರ್ಭದಲ್ಲಿ ಏನೇನು ವಿಚಿತ್ರಗಳು ಅಡಗಿವೆಯೋ ದೇವರೇ ಬಲ್ಲನು. ಇಂಥ ಭೂಮಿಯು ಷೋಡಶಕಲಬ್ರಹ್ಮದ ಒಂದಂಶವಾಗಿರುವದು. ಹಾಗೆಯೇ ಅಂತರಿಕ್ಷಲೋಕವನ್ನೂ ಗ್ರಹಿಸಬೇಕು. ಅಂತರಿಕ್ಷವು ನಿರಾಲಂಬನವಾಗಿದ್ದು ಹಕ್ಕಿಪಕ್ಷಿಗಳ ಹಾಗೂ ವಾಯುಯಾನಗಳ ಸಂಚಾರಕ್ಕೆ ತೆರವಾಗಿರುವದು. ಇದು ಭೌತಿಕದೃಷ್ಟಿಯಾಯಿತು.

ಆದರೆ ದೇವತಾದೃಷ್ಟಿಯಿಂದ ಕಂಡಾಗ ವಾಯುಮಂಡಲವೂ ಪರ್ಜನ್ಯ-ಗ್ರಹನಕ್ಷತ್ರಾದಿಗಳೂ ಇದರಲ್ಲಿ ಕಂಡುಬರುವವು. ಈ ದೇವತೆಗಳೆಲ್ಲರ ಆಶ್ರಯವಾಗಿರುವ ಹಾಗೂ ವಿಷ್ಣುವಿನ ಪಾದದಿಂದ ಅಳೆಯಲ್ಪಟ್ಟಿರುವ ಈ ಪವಿತ್ರಲೋಕವು ಬ್ರಹ್ಮದ ಒಂದು ಕಲೆಯೆಂದು ಹೇಳುವದರಲ್ಲಿ ಆಶ್ಚರ್ಯವೇನಿದೆ ? ಹಾಗೆಯೇ ದ್ಯುಲೋಕವು ಸಹ ಒಂದು ಕಲೆಯಾಗಿರುತ್ತದೆ. ದ್ಯುಲೋಕವನ್ನು ನಾವು ಕಂಡಿಲ್ಲವಾದರೂ ಅಲ್ಲಿರುವ ಇಂದ್ರಾದಿದೇವತೆಗಳ ವಿಷಯವಾಗಿ ಪುರಾಣಗಳಲ್ಲಿ ನಾವು ಕೇಳಿರುತ್ತೇವೆ. ಈ ಲೋಕವು ಕೂಡ ವಿಷ್ಣುಪಾದಗಳಿಂದ ಆಕ್ರಾಂತವಾಗಿರುತ್ತದೆ. ಇದು ಬ್ರಹ್ಮದ ಒಂದು ಕಲೆಯಾಗಿದೆ. ಕಡೆಯದಾಗಿ ಸಮುದ್ರವು ಸಹ ಬ್ರಹ್ಮದ ಒಂದು ಕಲೆಯಾಗಿರುತ್ತದೆ. ಸಮುದ್ರದ ಅಂಚನ್ನು ನಾವು ನೋಡಿರುವದು ನಿಜ. ಆದರೆ ಸಮುದ್ರದ ವೈಶಾಲ್ಯ, ಆಳ- ಮುಂತಾದದ್ದು ನಮಗೆ ಹೆಚ್ಚು ಪರಿಚಿತವಾಗಿಲ್ಲ. ಇದರ ಹೆಚ್ಚಿನ ವಿಜ್ಞಾನಕ್ಕಾಗಿಯೂ ಪ್ರಯೋಜನಾಪೇಕ್ಷೆಯಿಂದಲೂ ಕೆಲವು ಸಾಹಸಿಗಳೂ ಜಾಣರೂ ಪ್ರಯತ್ನಿಸುತ್ತಿದ್ದಾರೆ. ಆದರೆ ಸಮುದ್ರರಾಜನು ಕೂಡ ಒಬ್ಬ ದೇವತೆಯೇ ಆಗಿದ್ದಾನೆ. ತ್ರೇತಾಯುಗದಲ್ಲಿ ಈ ಸಮುದ್ರರಾಜನು ಶ್ರೀರಾಮನಿಗೆ ಕಾಣಿಸಿಕೊಂಡ ಕಥೆಯು ರಾಮಾಯಣದಲ್ಲಿದೆ. ಹೀಗೆ ಸಮುದ್ರವು ಕೂಡ ಬ್ರಹ್ಮದ ಒಂದು ಕಲೆಯಾಗಿದೆ. ಈ ಚತುಷ್ಕಲಬ್ರಹ್ಮವನ್ನು ಅನಂತಗುಣವುಳ್ಳದ್ದೆಂದು ಉಪಾಸನೆಮಾಡುವವನು ಅನಂತವಾದ ಲೋಕಗಳನ್ನು ಗೆದ್ದುಕೊಳ್ಳುವನು—ಎಂಬಿದು ಫಲವು. ಈ ರೀತಿಯಾಗಿ ಚತುಷ್ಕಲವಾದ ಬ್ರಹ್ಮವನ್ನು ಚಿಂತನ ಮಾಡುವಂತೆ ಸತ್ಯಕಾಮನಿಗೆ ಅಗ್ನಿಯು ಉಪದೇಶಮಾಡಿದನು-ಎಂದು ತಿಳಿಯಬೇಕು.

ಈಗ ಮುಂದಿನ ಕಥೆಯನ್ನು ನೋಡೋಣ. ಅಗ್ನಿದೇವನು ಕಡೆಯಲ್ಲಿ ಸತ್ಯಕಾಮನಿಗೆ "ಅಯ್ಯ, ಮುಂದಿನ ಬ್ರಹ್ಮದ ಪಾದವನ್ನು ನಿನಗೆ ಹಂಸವು ಹೇಳಿಕೊಡಲಿದೆ" ಎಂದು ತಿಳಿಸಿ ಅಂತರ್ಧಾನನಾದನು. ಅನಂತರ ಬೆಳಗಾದ ಕೂಡಲೆ ಅವನು ಗೋವುಗಳನ್ನು ಅಟ್ಟಿಕೊಂಡು ಗುರುಗಳ ಮನೆಗೆ ಹೊರಟನು. ಆ ದಿನವೂ ಕಳೆದು ಸಂಜೆಯಾಗಲು ಒಂದು ಸ್ಥಳದಲ್ಲಿ ಗೋವುಗಳನ್ನು ಕೂಡಿಸಿ ತಾನೂ ನಿಂತನು. ಆಗ ಒಂದು ಹಂಸವು ಅವನ ಬಳಿಗೆ ಹಾರಿಬಂದು 'ಸೋಮ್ಯ, ನಿನಗೆ ಬ್ರಹ್ಮದ ಒಂದು ಪಾದವನ್ನು ಹೇಳಿಕೊಡುವೆನು' ಎಂದಿತು. 'ಪೂಜ್ಯರೆ, ಹೇಳಿಕೊಡೋಣವಾಗಲಿ'- ಎಂದು ಸತ್ಯಕಾಮನು ನುಡಿಯಲು ಅದು ಈ ರೀತಿಯಾಗಿ ಉಪದೇಶಮಾಡಿತು. "ಅಗ್ನಿಯು ಒಂದು ಕಲೆ ; ಸೂರ್ಯನು ಒಂದು ಕಲೆ ; ಚಂದ್ರನು ಒಂದು ಕಲೆ, ಮಿಂಚು ಒಂದು ಕಲೆ ; ಇದೇ ಬ್ರಹ್ಮದ ಜ್ಯೋತಿಷ್ಮಾನ್ ಎಂಬ ಪಾದವು. ಹೀಗೆಂದು ಉಪಾಸನೆಮಾಡು'' ಎಂದು ಹೇಳಿತು. ಇಲ್ಲಿ ಜ್ಯೋತಿಷ್ಮಂತವಾದ ಬ್ರಹ್ಮದ ಪಾದದ ಉಪದೇಶವಿರುವದರಿಂದ ಹಂಸರೂಪದಿಂದ ಆದಿತ್ಯದೇವತೆಯೇ ಬಂದು ಉಪದೇಶಮಾಡಿರುತ್ತಾನೆಂದು ತಿಳಿಯಬೇಕು. ಇಲ್ಲಿರುವ ದೇವತೆಗಳೆಲ್ಲರೂ ಪ್ರತ್ಯಕ್ಷದೇವತೆಗಳೇ ಆಗಿದ್ದಾರೆ. ಆದ್ದರಿಂದ ಸಂಶಯಕ್ಕೆ ಅವಕಾಶವಿರುವದಿಲ್ಲ.

ಅಗ್ನಿಯನ್ನು ದೇವಪುರೋಹಿತನೆಂದೇ ವೇದದಲ್ಲಿ ಹೊಗಳಿದೆ. ಆದಿತ್ಯಚಂದ್ರರುಗಳ ಸ್ತುತಿಯೂ ವೈದಿಕಸಾಹಿತ್ಯದಲ್ಲಿ ಬೇಕಾದಷ್ಟಿದೆ. ಮಾನವನ ಆಯುಷ್ಯವನ್ನೆಲ್ಲ ಅಳೆಯುವವರೇ ಈ ಕಾಲಾಭಿಮಾನಿಗಳಾದ ಸೂರ್ಯಚಂದ್ರರು. ಇವರುಗಳು ಬ್ರಹ್ಮದ ಅಂಶರು ಎಂಬುದು ಎಲ್ಲರಿಗೂ ಗೊತ್ತಿರುವ ವಿಷಯವಾಗಿದೆ. ಇನ್ನು ಮಿಂಚು ಸಹ ಬ್ರಹ್ಮದ ಒಂದು ಕಲೆಯೆಂದು ಇಲ್ಲಿ ತಿಳಿಸಿದೆ. ಸೂರ್ಯಚಂದ್ರರಂತೆ ಇದು ಯಾವಾಗಲೂ ಕಾಣಿಸಿಕೊಳ್ಳುವದಿಲ್ಲ. ಮಳೆಯು ಬರುವ ಮುಂಚೆ ತೋರಿ ಕೊಳ್ಳುತ್ತದೆ. ಇದು ಒಂದು ಶಕ್ತಿವಿಶೇಷವೆಂದು ಕರೆಯಲ್ಪಟ್ಟಿದೆ. ವಿದ್ಯುಚ್ಛಕ್ತಿಯು ಇದರ ಮಹಿಮೆಯೇ ಆಗಿದೆ. ದೈವಸೃಷ್ಟಿಯಾದ ಇದನ್ನು ದೇವತೆಯಾಗಿಯೂ ಬ್ರಹ್ಮದ ಕಲೆಯಾಗಿಯೂ ತಿಳಿಯುವದೇ ಉಪಾಸನೆಯೆನಿಸುವದು. ಹೀಗೆ ನಾಲ್ಕು ದಿವ್ಯಕಲೆಗಳಾದ ಅಗ್ನಿ, ಸೂರ್ಯ, ಚಂದ್ರ, ಮಿಂಚು–ಗಳನ್ನು ಕೂಡಿಸಿ ಬ್ರಹ್ಮದ ಒಂದು ಪಾದವೆಂದೂ ಇದನ್ನು ಜ್ಯೋತಿಷ್ಮಾನ್– ಎಂಬ ಗುಣವುಳ್ಳದ್ದಾಗಿ ಉಪಾಸನೆಮಾಡಬೇಕೆಂದೂ ಹಂಸವು ಉಪದೇಶಿಸಿ ಅಂತರ್ಧಾನವಾಯಿತು. ಈ ಜ್ಯೋತಿಷ್ಮಂತಬ್ರಹ್ಮೋಪಾಸಕನಿಗೆ ಈ ಲೋಕದಲ್ಲಿ ಒಳ್ಳೆಯ ತೇಜಸ್ಸು ಲಭಿಸುವದು. ಶರೀರವನ್ನು ಬಿಟ್ಟಮೇಲೆ ಸೂರ್ಯಾದಿಗಳ ಲೋಕವೇ ದೊರಕುವದು– ಎಂದು ಫಲವನ್ನೂ ಉಪನಿಷತ್ತಿನಲ್ಲಿ ತಿಳಿಸಿದೆ.

ಈಗ ಕಡೆಯದಾಗಿ 'ಮದ್ಗು' ಎಂಬ ಒಂದು ಪಕ್ಷಿಯು ಸತ್ಯಕಾಮನಿಗೆ ಮಾಡಿದ ಉಪದೇಶವನ್ನು ಕೇಳೋಣ. ಹಂಸವು ತನ್ನ ಉಪದೇಶದ ಕಡೆಯಲ್ಲಿ 'ನಿನಗೆ ಮದ್ಗುವು ಬ್ರಹ್ಮದ ಇನ್ನೊಂದು ಪಾದವನ್ನು ತಿಳಿಸಲಿದೆ'– ಎಂದು ಹೇಳಿ ಹೊರಟು ಹೋಯಿತು. ಆಗ ಸತ್ಯಕಾಮನು ಆಗಲಿ ! ಎಂದು ರಾತ್ರಿಯನ್ನು ಕಳೆದು ಬೆಳಗಾಗುತ್ತಲೆ ಎಂದಿನಂತೆ ಗೋವುಗಳನ್ನು ಹೊಡೆದುಕೊಂಡು ಗುರುಗಳ ಮನೆಯ ಕಡೆಗೆ ಹೊರಟನು. ಆ ದಿನವೂ ಸಂಜೆಯಾಗಲು ಗೋವುಗಳನ್ನು ಒಂದು ಕಡೆ ಒಟ್ಟುಗೂಡಿಸಿ ಅಗ್ನಿಯನ್ನು ಪ್ರಜ್ವಲಿಸಿ ಸಮಿದಾಧಾನಮಾಡಿದನು. ಅಗ್ನಿಯ ಬಳಿಯಲ್ಲೇ ಕುಳಿತುಕೊಂಡನು. ಅವನ ಬಳಿಗೆ ಮದ್ಗುವು ಹಾರಿಬಂದಿತು. ನೀರಿನಲ್ಲಿ ಸಂಚರಿಸುವ ಒಂದು ಜಾತಿಯ ಹಕ್ಕಿಯನ್ನು ಮದ್ಗುವೆನ್ನುವರು. ಆ ರೂಪದಲ್ಲಿ ಪ್ರಾಣದೇವತೆಯೇ ಬಂದು ಸತ್ಯಕಾಮನಿಗೆ 'ಅಯ್ಯ, ನಿನಗೆ ಬ್ರಹ್ಮದ ಪಾದವನ್ನು ಹೇಳಿಕೊಡುವೆನು' ಎಂದನು. 'ಪೂಜ್ಯರೆ, ಹೇಳಿಕೊಡಬೇಕು' ಎಂದು ಸತ್ಯಕಾಮನು ನುಡಿಯಲು "ಪ್ರಾಣ, ಚಕ್ಷುಸ್ಸು, ಶ್ರೋತ್ರ, ಮನಸ್ಸು– ಇವೇ ಬ್ರಹ್ಮದ ನಾಲ್ಕು ಕಲೆಗಳು. ಇವಿಷ್ಟೂ ಸೇರಿ ಒಂದು ಪಾದವು. ಈ ಚತುಷ್ಕಲಬ್ರಹ್ಮವನ್ನು 'ಆಯತನವಾನ್' ಎಂದು ಉಪಾಸನೆಮಾಡು"–ಎಂದು ಹೇಳಿಕೊಟ್ಟಿತು.

ವೈದಿಕರು ಮಂತ್ರಪುಷ್ಪವನ್ನು ಹೇಳುವಾಗ "ಆಯತನವಾನ್ ಭವತಿ" ಎಂದು ಹೇಳುವ ಪ್ರಸಿದ್ಧವಾದ ವೇದಭಾಗವನ್ನು ಅನೇಕರು ಕೇಳಿರಬಹುದು. 'ಆಯತನ'ವೆಂದರೆ ಆಶ್ರಯವು. ವ್ಯವಹಾರದಲ್ಲಿ ನಾವೆಲ್ಲರೂ ಒಂದೊಂದು ಮನೆ

ಯನ್ನು ಆಶ್ರಯಿಸಿಕೊಂಡಿರುವೆವು. ಸ್ವಂತಮನೆಯುಳ್ಳವರಾಗಿದ್ದರಂತೂ ಈಗಿನ ಕಾಲಕ್ಕೆ ಆಯತನವಂತರೇ ಸರಿ. ಆಯತನವನ್ನು ಬಯಸುವವರು ಕೂಡ ಭಗವಂತನ ಸನ್ನಿಧಿಯಲ್ಲಿ ಮೇಲ್ಕಂಡ ಮಂತ್ರಗಳಿಂದ ಪ್ರಾರ್ಥಿಸಿಕೊಳ್ಳುವದು ಸೂಕ್ತವಾಗಿದೆ. ಇರಲಿ. ಇಲ್ಲಿ ಆಯತನಫಲವನ್ನುಂಟುಮಾಡುವ ಬ್ರಹ್ಮದ ಉಪಾಸನೆಯನ್ನು ಹೇಳಲಾಗಿದೆ. ಪ್ರಾಣದೇವತೆಯೇ ಮದ್ಗುಪಕ್ಷಿಯ ರೂಪವನ್ನು ಧರಿಸಿ ಬ್ರಹ್ಮದ ಕಡೆಯ ಪಾದವನ್ನು ಉಪದೇಶಿಸಿ ಈ ಫಲವನ್ನೂ ಹೇಳಿತು. ಇಲ್ಲಿರುವ ದೇವತೆಗಳೆಲ್ಲ ಅಧ್ಯಾತ್ಮವಾಗಿ ನಮ್ಮೊಳಗೇ ಇರುವರು. ನಾವು ಉಸಿರಾಡುತ್ತಿರುವದು, ನೋಡುವದು,ಕೇಳುವದು, ಆಲೋಚಿಸುವದು-ಇವೆಲ್ಲವೂ ಪ್ರಾಣಾದಿದೇವತೆಗಳ ಅನುಗ್ರಹದಿಂದಲೇ ಆಗಿದೆ. ಅವರುಗಳನ್ನೇ ಬ್ರಹ್ಮದ ಕಲೆಗಳೆಂದು ಕರೆಯಲಾಗಿದೆ. ಹೀಗೆ ಹದಿನಾರು ಕಲೆಗಳಿಂದಲೂ ನಾಲ್ಕು ಪಾದಗಳಿಂದಲೂ ಕೂಡಿದ ಬ್ರಹ್ಮವನ್ನು ವಾಯು, ಅಗ್ನಿ, ಆದಿತ್ಯ, ಪ್ರಾಣ-ಎಂಬ ದೇವತೆಗಳು ಸತ್ಯಕಾಮನಿಗೆ ಉಪದೇಶಿಸಿದರು. ಬ್ರಹ್ಮವಿದ್ಯೆಯು ಪೂರ್ಣವಾಯಿತು.

ಅನಂತರ ಸತ್ಯಕಾಮನು ಗುರುಗಳ ಮನೆಗೆ ಸಹಸ್ರಗೋವುಗಳೊಡನೆ ಬಂದು ತಲುಪಿದನು. ದೂರದಿಂದಲೇ ಅವನನ್ನು ಕಂಡ ಗುರುಗಳು 'ಸತ್ಯಕಾಮನೆ, ನೀನು ಬ್ರಹ್ಮವಿದನಂತೆಯೇ ಕಾಣುತ್ತಿರುವೆಯಲ್ಲ, ಬ್ರಹ್ಮವಿದ್ಯೆಯನ್ನು ನಿನಗೆ ಯಾರು ಹೇಳಿಕೊಟ್ಟರು ? ಎಂದರು. ಆಗ ಅವನು "ಪೂಜ್ಯರೆ, ತಮ್ಮ ಶಿಷ್ಯನಾಗಿರುವ ನನಗೆ ಬೇರೆ ಯಾವ ಮನುಷ್ಯಮಾತ್ರರಾದ ಗುರುಗಳು ಉಪದೇಶಮಾಡಲು ಧೈರ್ಯಮಾಡಿಯಾರು ? ಆದ್ದರಿಂದ ಮನುಷ್ಯರಲ್ಲದವರಿಂದ ಈಗ ಬ್ರಹ್ಮೋಪದೇಶವನ್ನೇನೋ ಪಡೆದಿರುತ್ತೇನೆ. ಆದರೆ ತಮ್ಮಂಥವರಿಂದ ನಾನು ಕೇಳಿರುವಂತೆ-ಆಚಾರ್ಯನಿಂದ ಅನುಗೃಹೀತವಾಗಿ ಬಂದ ವಿದ್ಯೆಯೇ ಸಾಧುತಮವಾದದ್ದು ; ಅದೇ ಪರಾಕಾಷ್ಠೆಯು-ಎಂದು ನೆರೆನಂಬಿರುವೆನು. ದೇವತೆಗಳೇ ನನಗೆ ಉಪದೇಶಮಾಡಿದ್ದರೂ ಇರಬಹುದು. ಆದರೂ ತಾವು ಹೇಳಿಕೊಟ್ಟಲ್ಲದೆ ನನ್ನ ಇಚ್ಛೆಯು ಪರಿಪೂರ್ಣವಾಗಲಾರದು. ಈಗ ತಾವೇ ನನಗೆ ಬ್ರಹ್ಮೋಪದೇಶವನ್ನು ಮಾಡಿ ಉದ್ಧಾರಮಾಡಬೇಕು" ಎಂದು ಬೇಡಿಕೊಂಡನು. ಹಾರಿದ್ರುಮತರು ಆತನ ಗುರುಭಕ್ತಿಗೂ ವಿದ್ಯಾನಿಷ್ಠೆಗೂ ಮೆಚ್ಚಿ ತಲೆದೂಗಿದರು. ತಮ್ಮ ಪ್ರಿಯಶಿಷ್ಯನನ್ನಾಗಿ ಸ್ವೀಕರಿಸಿ ಈವರೆಗೆ ದೇವತೆಗಳು ಸತ್ಯಕಾಮನಿಗೆ ಹೇಳಿಕೊಟ್ಟಿದ್ದ ಷೋಡಶಕಲಪುರುಷವಿದ್ಯೆಯನ್ನೇ ಸ್ವಲ್ಪವೂ ಮುಕ್ಕಾಗದಂತೆ ಮತ್ತೆ ಹೇಳಿಕೊಟ್ಟರು. ಇದರಿಂದ ಸತ್ಯಕಾಮನು ಕೃತಾರ್ಥನಾದನು. ಹೀಗೆ ಬ್ರಹ್ಮವಿದ್ಯೆಯನ್ನು ಗುರುಮುಖದಿಂದಲೇ ಸ್ವೀಕರಿಸಬೇಕೆಂಬುದೂ ಗುರುಸೇವೆಯನ್ನು ನಿಷ್ಠೆಯಿಂದ ಮಾಡುವವನಿಗೆ ವಿದ್ಯಾಗ್ರಹಣದ ವಿಷಯದಲ್ಲಿ ದೇವತೆಗಳು ಕೂಡ ನೆರವಾಗುತ್ತಾರೆಂಬುದೂ ಈ ಕಥೆಯಿಂದ ತಿಳಿದುಬರುತ್ತದೆ. ಷೋಡಶಕಲಬ್ರಹ್ಮವಿದ್ಯೆಗೂ ಹಾರಿದ್ರುಮತ ಸತ್ಯಕಾಮರುಗಳಿಗೂ ನಾವು ಪ್ರಣಾಮಗಳನ್ನು ಅರ್ಪಿಸೋಣ.

---

# ಸಾಮಾನ್ಯನೀತಿ

**ಕಾರ್ಯಾಪೇಕ್ಷೀ ಜನಃ ಪ್ರಾಯಃ ಪ್ರೀತಿಮಾವಿಷ್ಕರೋತ್ಯಲಮ್ ।**
**ಲೋಭಾರ್ಥೀ ಶೌಂಡಿಕಃ ಶಷ್ಪೈಃ ಮೇಷಂ ಪುಷ್ಣಾತಿ ಪೇಶಲೈಃ ॥ ೧ ॥**

೧. ತನ್ನ ಕಾರ್ಯಸಾಧನೆಯನ್ನು ಬಯಸುವವನು ಬಹಳಮಟ್ಟಿಗೆ ಅಂಥ ಜನರನ್ನು ಪ್ರೀತಿಮಾಡುತ್ತಾನೆ. ಹೇಗೆಂದರೆ (ಮಾಂಸದ) ಆಶೆಯುಳ್ಳ (ಕುರುಬನು) ಟಗರನ್ನು ಒಳ್ಳೆಯ ಚಿಗುರು ಮೇವುಗಳಿಂದ ಬೆಳೆಸುತ್ತಾನೆ.

**ದುರ್ಜನೋ ಜೀಯತೇ ಯುಕ್ತ್ಯಾ ವಿಗ್ರಹೇಣ ನ ಧೀಮತಾ ।**
**ನಿಪಾತ್ಯತೇ ಮಹಾವೃಕ್ಷಃ ತತ್ಸವಿಧಾಪಕ್ಷಿತಿಕ್ಷಯಾತ್ ॥ ೨ ॥**

೨. ದೊಡ್ಡಮರವನ್ನು ಕೆಡವುವಾಗ ಅದರ ಸುತ್ತಲೂ ಭೂಮಿಯನ್ನು ಅಗೆದು ದುರ್ಬಲಗೊಳಿಸುವಂತೆ- ಜಾಣನಾದವನು ದುಷ್ಟನನ್ನು ಯುಕ್ತಿಯಿಂದ ಗೆಲ್ಲುತ್ತಾನೆಯೇ ಹೊರತು ಜಗಳದಿಂದಲ್ಲ.

**ಸ್ವಭಾವಸುಂದರಂ ವಸ್ತು ನ ಸಂಸ್ಕಾರಮಪೇಕ್ಷತೇ ।**
**ಮುಕ್ತಾರತ್ನಸ್ಯ ಶಾಣಾಶ್ಮಘರ್ಷಣಂ ನೋಪಯುಜ್ಯತೇ ॥ ೩ ॥**

೩. ಬೆಲೆಬಾಳುವ ಮುತ್ತನ್ನು ಹೇಗೆ ಸಾಣೆ ಹಿಡಿಯುವ ಆವಶ್ಯಕತೆಯಿಲ್ಲವೋ ಹಾಗೆ ಸ್ವಭಾವದಿಂದಲೇ ಸುಂದರವಾಗಿರುವ ಪದಾರ್ಥಕ್ಕೆ ಏನೂ ಸಂಸ್ಕಾರ (ಅಲಂಕಾರ)ಮಾಡಬೇಕಾದದ್ದಿರುವದಿಲ್ಲ.

**ಯೇನಾತ್ಮಾ ಪಣ್ಯತಾಂ ನೀತಃ ಸ ಏವಾನ್ವಿಷ್ಯತೇ ಜನೈಃ ।**
**ಹಸ್ತೀ ಹೇಮಸಹಸ್ರೇಣ ಕ್ರೀಯತೇ ನ ಮೃಗಾಧಿಪಃ ॥ ೪ ॥**

೪. ಸಾವಿರಾರು ಚಿನ್ನದ ನಾಣ್ಯಗಳನ್ನು ತೆತ್ತು ಆನೆಯನ್ನು ಜನರು ಕೊಳ್ಳುತ್ತಾರೆಯೇ ಹೊರತು ಸಿಂಹವನ್ನು ಕೊಳ್ಳುವದಿಲ್ಲ. ಹಾಗೆಯೇ ತಮ್ಮ ಆತ್ಮನನ್ನೇ– ಆ ಆತ್ಮನು (ಹೆಂಡಿರುಮಕ್ಕಳೆಂಬ ವ್ಯಾಮೋಹದಿಂದ) ಕ್ರೀತನಾಗಿದ್ದರೂ–ಹುಡುಕುತ್ತಾರೆ.

**ಅಸಂಭವಗುಣಸ್ತುತ್ಯಾ ಜಾಯತೇ ಸ್ವಾತ್ಮನಸ್ತ್ರಪಾ ।**
**ಕರ್ಣಿಕಾರಂ ಸುಗಂಧೀತಿ ವದನ್ ಕೋ ನೋಪಹಾಸ್ಯತೇ ॥ ೫ ॥**

೫. ಕಣಿಗಿಲೆಯ ಹೂವನ್ನು ಸುವಾಸನೆಯಾಗಿದೆ–ಎನ್ನುವವನು ಹಾಸ್ಯಕ್ಕೆ ಗುರಿಯಾಗುವಂತೆ ಇಲ್ಲಸಲ್ಲದ ಗುಣಗಳನ್ನು ಜೋಡಿಸಿಕೊಂಡು ಹೊಗಳುವವನು ನಾಚಿಕೆಗೀಡಾಗುವನು.

**ನಿಜಾಶಯವದಾಭಾತಿ ಪುಂಸಾಂ ಚಿತ್ತೇ ಪರಾಶಯಃ ।**
**ಪ್ರತಿಮಾ ಮುಖಚಂದ್ರಸ್ಯ ಕೃಪಾಣೇ ಯಾತಿ ದೀರ್ಘತಾಮ್ ॥ ೬ ॥**

೬. ನಮ್ಮ ಮುಖವು ಹೊಳಪಾದ ಉದ್ದವಾದ ಕತ್ತಿಯಲ್ಲಿ ಉದ್ದುದ್ದವಾಗಿ ಮಾರುಹೊಳೆಯುವಂತೆ ಬೇರೊಬ್ಬನ ಅಭಿಪ್ರಾಯವೂ ನಮ್ಮ ಮನಸ್ಸಿನಲ್ಲಿ ನಮ್ಮಂತೆಯೇ ಹೊಳೆಯುತ್ತದೆ.

———

# ಸತ್ಯಕಾಮನ ಪತ್ರಗಳು

## ಜ್ಞಾನಯಜ್ಞ-ಕರ್ಮಯಜ್ಞಗಳು

"ನಮ್ಮ ಊರಿನಲ್ಲಿ ಯಾವದಾದರೊಂದು ಸತ್ಕಾರ್ಯವನ್ನು ನಡೆಯಿಸ ಬೇಕೆಂದು ನಾವು ಕೆಲವರು ನಿಶ್ಚಯಿಸಿದ್ದೇವೆ. ಜನರ ಸಹಕಾರವೂ ತಕ್ಕಮಟ್ಟಿಗೆ ಇದೆ. ಆದರೆ ಕೆಲವರು ಹೋಮಹವನಾದಿಗಳನ್ನು ನಡೆಸಬೇಕೆನ್ನುತ್ತಾರೆ. ಮತ್ತೆ ಕೆಲವರು ಶ್ರವಣವೇ ಪ್ರಧಾನವಾಗಿರುವಂಥ ಬೌದ್ಧಿಕವಾದ ಉಪನ್ಯಾಸ, ಗೋಷ್ಠಿ, ಭಜನೆ, ಸತ್ಸಂಗಗಳನ್ನು ನಡೆಯಿಸೋಣ- ಎನ್ನುತ್ತಾರೆ. ಯೋಗ್ಯರಾದ ಕಾರ್ಯ ನಿರ್ವಾಹಕರು ದೊರೆತರೆ ಯಾವದಾದರೊಂದನ್ನು ನಡೆಯಿಸೋಣವೊ? ಎರಡನ್ನೂ ನಿರ್ವಹಿಸೋಣವೊ? ಎಂಬ ಬಗ್ಗೆ ನಮಗೆ ಸಂಶಯವಾಗಿರುತ್ತದೆ. ಈ ವಿಷಯದಲ್ಲಿ ತಾವೇನಾದರೂ ಸಲಹೆಗಳನ್ನು ನೀಡಬಲ್ಲಿರಾ ? ಎಂದು ಕೇಳಿ ನೀವು ಬರೆದಿರುವ ಪತ್ರವು ತಲುಪಿದೆ.

ಈಗಿನ ಕಾಲಕ್ಕೆ ಪ್ರತಿಯೊಬ್ಬನಿಗೂ ಧನಾಶೆಯು ಬೆಂಬಿಡಿದಿರುತ್ತದೆ. ಅದು ಸ್ವಲ್ಪಮಟ್ಟಿಗಾದರೂ ತೃಪ್ತಿಯಾದರೆ ಕೀರ್ತಿಯ ಆಶೆಯು ಬೆನ್ನುಹತ್ತುತ್ತದೆ. ಈಗ್ಗೆ ನಡೆಯುತ್ತಿರುವ ಅನೇಕ ಸಮಾರಂಭಗಳೆಲ್ಲವೂ ಈ ಅಸುರದ್ವಯರ ಪಾಲಾಗಿ ಬಿಟ್ಟಿವೆ. ನೀವುಗಳು ಕೂಡ ಇಂಥ ಉದ್ದೇಶವನ್ನೇ ಹೊಂದಿದ್ದರೆ ಸಾರ್ವಜನಿಕರ ಕಾಲ-ಹಣಗಳನ್ನು ವ್ಯರ್ಥಮಾಡುವಂಥ ಧರ್ಮದ ಹೆಸರಿನ ಅಥವಾ ಸಮಾಜೋ ದ್ಧಾರದ ಹೆಸರಿನ ಡಂಭಾಚಾರದ ಯಾವ ಸಮಾರಂಭವನ್ನೂ ಕೈಗೊಳ್ಳದಿರುವದೇ ಮೇಲು. ಏಕೆಂದರೆ ಪದಾರ್ಥಗಳ ಬೆಲೆಯೇರಿಕೆ, ಭೋಗಸಾಮಗ್ರಿಗಳ ಅನಿವಾರ್ಯ ಬಳಕೆ-ಮುಂತಾದ ನಾನಾವಿಧವಾದ ಕಷ್ಟಗಳಿಂದ ಜನರು ಬೇಸತ್ತಿರುತ್ತಾರೆ. ಆದ್ದ ರಿಂದ ನಿಮಗೇನಾದರೂ ನಿಜವಾಗಿ ಜನಸಾಮಾನ್ಯರಿಗೆ ಇಂಥ ಕಷ್ಟದಲ್ಲಿ ಸ್ವಲ್ಪ ವಾದರೂ ಮನೋವ್ಯಥೆಯನ್ನು ನೀಗಿ ಶಾಂತಿಸಮಾಧಾನಗಳ ಕೊಡುಗೆಯನ್ನು ಅರ್ಪಿಸುವ ಸದುದ್ದೇಶವಿದ್ದರೆ ಮೊದಲು ಲಾಭಕರವಾಗಿಯೂ ಕಾಲಹರಣವಾಗ ದಂತೆಯೂ ಸರಳವಾಗಿಯೂ ಯಾರಿಗೂ ಒತ್ತಾಯವಾಗಲಿ ಹಿಂಸೆಯಾಗಲಿ ಆಗ ದಂಥ ಏನಾದರೊಂದು ಕಾರ್ಯಕ್ರಮವನ್ನು ರೂಪಿಸಿಕೊಳ್ಳಿರಿ. ಇಂಥ ಕಾರ್ಯಕ್ರ ಮವು ಬಹಳಮಟ್ಟಿಗೆ ಕಡಿಮೆವೆಚ್ಚದ್ದಾಗಿದ್ದು ಹೆಚ್ಚು ಜನರಿಗೆ ಉಪಯೋಗವಾಗು ವಂತಿರಬೇಕು. ಇದರಲ್ಲಿ ಪ್ರಚಾರಮನೋಭಾವವಾಗಲಿ ಸ್ಪರ್ಧೆಯಾಗಲಿ ಇರಬಾ ರದು. ಯಾವ ಮತಧರ್ಮದವರಿಗೂ ಮನನೋಯುವಂತಿರಬಾರದು. ಇಂಥ ಸಮಾರಂಭಕ್ಕೆ ರಾಜಕೀಯವ್ಯಕ್ತಿಗಳ ಅಥವಾ ಗಣ್ಯ ಅತಿಥಿಗಳ ಆವಶ್ಯಕತೆಯಿರು ವದಿಲ್ಲ. ಬರಡುಭಾಷಣಗಳ- ಭರವಸೆಗಳ- ಇಲ್ಲಸಲ್ಲದ ಸನ್ಮಾನಗಳ-ಕಾರ್ಯಕ್ರಮ ಗಳೂ ಬೇಕಿರುವದಿಲ್ಲ. ಆದರೆ ಇಂಥ ಏರ್ಪಾಡಿಗೆ ಜನರೇ ಸೇರದೆಹೋದರೆ ಏನು ಗತಿ ? ಎಂದು ನಿಮಗೆ ಅನ್ನಿಸಬಹುದು. ಬಹುಜನರ ಗುಂಪಿಗಿಂತಲೂ ಆರಿಸಿ ತೆಗೆದ ಕೆಲವೇ ಮಂದಿ ಸಜ್ಜನರ ಗುಂಪಿದ್ದರೂ ಸಾಕು. ಒಂದು ವೇಳೆ ಇದರಲ್ಲಿ ಆಸಕ್ತಿಯಿ ಲ್ಲದವರು ಬರದಿದ್ದರೂ ಚಿಂತೆಯಿಲ್ಲ. ನಿಮ್ಮಗಳಿಗಂತೂ ಲಾಭವಾಗಿಯೇತೀರುತ್ತದೆ.

ಈಗ ನೇರವಾಗಿ ನಿಮ್ಮ ಪ್ರಶ್ನೆಗೆ ಉತ್ತರಿಸುವೆನು. ಈಗಿನ ಕಾಲಕ್ಕೆ ಜನರಿಗೆ ಕರ್ಮಕಾಂಡದ ಪರಿಚಯವು ತೀರ ಕಡಿಮೆ. ಮಂತ್ರಗಳ ಅರ್ಥವಾಗಲಿ, ಪ್ರಯೋಗವಿಧಾನಗಳ ಉದ್ದೇಶವಾಗಲಿ, ಯಾವ ದೇವತೆಗಾಗಿ ಕರ್ಮಾನುಷ್ಠಾನ ಮಾಡಲಾಗುವದೋ ಆ ದೇವತೆಯ ಗುಣಸ್ವರೂಪ ಮಹಿಮೆಗಳ ಪರಿಚಯವಾಗಲಿ ಏನೊಂದೂ ಗೊತ್ತಿರುವದಿಲ್ಲ. ಯಾರೋ ಒಬ್ಬರು ಮಂತ್ರವನ್ನು ಹೇಳುತ್ತಿದ್ದರೆ ಅಥವಾ ಹೋಮಮಾಡುತ್ತಿದ್ದರೆ ಉಳಿದವರೆಲ್ಲರೂ ಸುಮ್ಮನೆ ನೋಡುತ್ತಾ ಕುಳಿತಿರುತ್ತಾರೆ. ಇಷ್ಟಾದರೂ ಆದರೆ ಪುಣ್ಯವೇ ಸರಿ. ಆದರೆ ಬಹುಜನರು ಇಂಥ ಸಂದರ್ಭಗಳಲ್ಲಿಯೂ ಮಂತ್ರಗಳನ್ನೂ ಕೇಳದೆ ಮನಸ್ಸಿನಲ್ಲೂ ಏನೊಂದು ಅನುಸಂಧಾನವನ್ನೂ ಮಾಡದೆ ಹರಟೆಹೊಡೆಯುತ್ತಾ ಅಡ್ಡಿಮಾಡುವದೂ ಉಂಟು. ಕಾರ್ಯಕರ್ತರಿಗಂತೂ ಎಲ್ಲಾ ವಿಧವಾದ ಶ್ರಮವೂ ಆಗಿರುತ್ತದೆ. ಆದ್ದರಿಂದ ಕರ್ಮಕಾಂಡದ ಸಮಾರಂಭಗಳು ಜನರಲ್ಲಿ ತಾತ್ಕಾಲಿಕವಾಗಿ ಸ್ವಲ್ಪಮಟ್ಟಿಗೆ ಭಕ್ತಿ ಶ್ರದ್ಧೆಗಳನ್ನು ಉಂಟುಮಾಡಿದರೂ ಅವರನ್ನು ಉದ್ಬೋಧಗೊಳಿಸಲಾರವು. ಮತ್ತು ವಿದ್ಯಾವಿವೇಕಸಂಪನ್ನರನ್ನಾಗಿ ಮಾಡಲಾರವು. ಜೊತೆಗೆ ಕರ್ಮಾನುಷ್ಠಾನ ಮಾಡುವವರಿಗೆ ಕೂಡ ತಾವು ಏನು ಮಾಡುತ್ತಿದ್ದೇವೆ? ಇದರ ಉದ್ದೇಶವೇನು? ಅರ್ಥವೇನು? ಎಂಬುದೇ ತಿಳಿದಿರುವದಿಲ್ಲ. ಯಾಂತ್ರಿಕವಾಗಿ ಕಾರ್ಯನಿರ್ವಹಣೆ ಮಾಡಿ ಸಂಭಾವನೆ (ದಕ್ಷಿಣೆ)ಯನ್ನು ಪಡೆಯುವ ಗುರಿಯುಳ್ಳವರಾಗಿರುವವರೇ ಹೆಚ್ಚು. ಆದ್ದರಿಂದ ಮೊದಲು ನೀವು ಜನರನ್ನು ವೈದಿಕಸಮಾರಂಭಗಳಿಗೆ ತಕ್ಕ ಪ್ರಜೆಗಳನ್ನಾಗಿ ಹಾಗೂ ಅವುಗಳನ್ನು ಉಪಯೋಗಿಸಿಕೊಳ್ಳುವದು ಹೇಗೆಂಬ ತಿಳಿವಳಿಕೆಯುಳ್ಳವರನ್ನಾಗಿ ಮಾಡುವಂಥ ವಿಚಾರಪ್ರಧಾನವಾದ ಉಪನ್ಯಾಸರೂಪವಾದ ಕಾರ್ಯಕ್ರಮಗಳನ್ನೇ ಏರ್ಪಡಿಸಬೇಕು. ಶ್ರವಣಕ್ಕೆ ಕಡ್ಡಾಯವಾಗಿ ಪ್ರತಿಯೊಂದು ಮನೆಯವರೂ ಬರುವಂತೆ ಪ್ರೋತ್ಸಾಹಿಸಬೇಕು. ಒಂದು ಊರಿನಲ್ಲಿ ಹತ್ತುಸಾವಿರ ಜನರಿದ್ದು ಹತ್ತುಜನರು ಕೂಡ ಪ್ರವಚನಗಳನ್ನು ಕೇಳಲು ಬಾರದಿದ್ದರೆ ಅಂಥ ಊರಿನಲ್ಲಿ ನೀವು ಹೋಮಗಳನ್ನು ಮಾಡಿಸಿ ಊರುಸಂತರ್ಪಣೆ ಮಾಡಿಸಿ ಫಲವೇನು? ಯೋಚಿಸಿರಿ. ಜನರಿಗೆ ಕೇವಲ ಅನ್ನದಾನಮಾಡುವದೇ ನಿಮ್ಮ ಗುರಿಯಾದರೆ ಅದು ಅಪೂರ್ಣವೆಂದೇ ನನ್ನ ಭಾವನೆ. ಜ್ಞಾನದಾನದ ಮುಂದೆ ಅನ್ನದಾನವು ಕಿರಿದಾದುದು. ಆದ್ದರಿಂದ ನೀವುಗಳು ಕಡ್ಡಾಯವಾಗಿ ಶ್ರೋತೃಗಳ ಒಂದು ಗುಂಪನ್ನು ರಚಿಸಿಕೊಂಡು ಮೊದಲು ಕರ್ಮ-ಜ್ಞಾನಗಳ ರಹಸ್ಯವನ್ನು ಕೇಳಿ ತಿಳಿದುಕೊಳ್ಳಿರಿ. ತಿಳಿದನಂತರ ಅನುಷ್ಠಾನವನ್ನು ಕೈಗೊಳ್ಳಿರಿ. ದೇವರೆಂದರೇನು? ಧರ್ಮವೆಂದರೇನು? ಶಿಷ್ಟಾಚಾರಗಳು ಯಾವವು? ದೈವೀ-ಆಸುರೀಸಂಪತ್ತುಗಳಾವುವು? ನಾವು ಹೇಗೆ ನಡೆದುಕೊಳ್ಳಬೇಕು? ಏನನ್ನು ಓದಬೇಕು? ಏನನ್ನು ನೋಡಬೇಕು? ಏನನ್ನು ಚಿಂತಿಸಬೇಕು? ಇತ್ಯಾದಿ ವಿಷಯಗಳಿಗೆ ಬಲ್ಲವರಿಂದ ಉಪನ್ಯಾಸಗಳನ್ನು ಮಾಡಿಸಿರಿ. ನಿಮ್ಮ ಪ್ರಯತ್ನಗಳು ಜ್ಞಾನಯಜ್ಞದಿಂದಾರಂಭವಾಗಲಿ!

---

# ಆರಿಸಿದ ಅರಳುಮೊಗ್ಗುಗಳು

( ಶ್ರೀ ಶಂಕರಭಗವತ್ಪಾದರ ಸರ್ವಸಮ್ಮತೋಪದೇಶಗಳು- ಎಂಬ ಗ್ರಂಥದಿಂದ )

೧. ಶ್ರೀಶಂಕರಾಚಾರ್ಯರ ಉಪದೇಶಗಳೆಂಬಿವು ಅವರು ಸ್ವಂತವಾಗಿ ಮಾಡಿಕೊಂಡಿದ್ದ ಅಭಿಪ್ರಾಯಗಳೆಂದು ಹೇಳುವದಕ್ಕೆ ಬರುವದಿಲ್ಲ. ಏಕೆಂದರೆ ಅವರು ತಮ್ಮ ಗ್ರಂಥಗಳಲ್ಲಿ ಎಲ್ಲಿಯೂ ಹಾಗೆ ಹೇಳಿಕೊಂಡಿರುವದಿಲ್ಲ. ಆಚಾರ್ಯರಿಗಿಂತ ಹಿಂದೆಯೇ ಅವರ ಗುರುಸಂಪ್ರದಾಯಪರಂಪರೆಯವರು ವೇದಾಂತಗಳ ವ್ಯಾಖ್ಯಾನಗಳನ್ನು ಪ್ರಾರಂಭಿಸಿಬಿಟ್ಟಿದ್ದರೆಂಬುದಕ್ಕೆ ಸಾಕಷ್ಟು ಆಧಾರವೂ ಇದೆ. ಆದ್ದರಿಂದ ಶಂಕರಾಚಾರ್ಯರ ಉಪದೇಶಗಳೆಂದರೆ ಅವರು ಅಂಗೀಕರಿಸಿದ್ದ ಗುರುಶಿಷ್ಯಸಂಪ್ರದಾಯಪರಂಪರೆಯಲ್ಲಿ ಬೀಜರೂಪವಾಗಿ ಅಡಗಿದ್ದ ತತ್ತ್ವೋಪದೇಶಗಳೇ ಆಗಿರುತ್ತವೆ. ಅವುಗಳನ್ನೇ ಭಗವತ್ಪಾದರು ತಮ್ಮದೇ ಆದ ಒಂದು ಅಸಾಧಾರಣ ರೀತಿಯಿಂದ ನಮಗೆ ಅನುಗ್ರಹಿಸಿರುವದರಿಂದ ಅವುಗಳನ್ನು ಭಗವತ್ಪಾದರ ಉಪದೇಶಗಳು- ಎಂದು ಕರೆಯುವದಕ್ಕೆ ಯಾವ ಅಡ್ಡಿಯೂ ಇರುವದಿಲ್ಲ. ಈಗ್ಗೆ ನಾಗರಿಕಪ್ರಪಂಚದಲ್ಲಿ ಶ್ರೀಶಂಕರಾಚಾರ್ಯರವರೆಗಿನ ಹಿಂದಿನವರ ವೇದಾಂತೋಪದೇಶಗಳೆಲ್ಲವೂ ಬಹಳಮಟ್ಟಿಗೆ ಅವರ ಗ್ರಂಥಗಳಿಂದಲೇ ದೊರಕಬೇಕಾಗಿದೆ. ಹೀಗಿರುವದರಿಂದ ಶಂಕರರ ಅಭಿಪ್ರಾಯಗಳೆಂಬಿವೇ ನಮಗೆ ನಿಜವಾದ ವೇದಾಂತಸಂಪ್ರದಾಯಪರಂಪರೆಯ ಮೂಲಉಪದೇಶಗಳಾಗಿರುತ್ತವೆ. ಭಗೀರಥನು ತಂದ ಗಂಗೆಯನ್ನು ಕಾಶಿಯಿಂದ ಯಾರಾದರೂ ವೈದಿಕರು ತಂದು ನಮ್ಮ ತಲೆಯಮೇಲೆ ಚಿಮುಕಿಸಿದರೆ 'ಶಾಸ್ತ್ರಿಗಳು ತಂದ ಗಂಗೆ' ಎನ್ನುವಂತೆ 'ಶಂಕರರ ಸರ್ವಸಮ್ಮತವಾದ ವೇದಾಂತೋಪದೇಶಗಳು' ಎಂದು ಕರೆದರೆ ಯಾವ ದೋಷವೂ ಇಲ್ಲ.

೨. ಆಚಾರ್ಯರು ವಿಚಾರಕ್ಕೆ ತೆಗೆದುಕೊಂಡಿರುವ ವಿಷಯವು ದೇಶಕಾಲಗಳ ಪರಿಚ್ಛೇದವಿಲ್ಲದ್ದಾದ್ದರಿಂದ ಆ ಪರಮಾರ್ಥದ ಬಗ್ಗೆ ದೇಶಕಾಲಗಳ ಉಪಾಧಿಯಿಂದ ಭಿನ್ನಾಭಿಪ್ರಾಯಗಳು ಉಂಟಾಗುವದು ಶಕ್ಯವೇ ಇಲ್ಲ. ಗಣಿತಶಾಸ್ತ್ರದ ತತ್ತ್ವವು- ಉದಾಹರಣೆಗೆ ಎಂಟೂ+ನಾಲ್ಕು–ಹನ್ನೆರಡು ಎಂಬುದು ಎಲ್ಲಾ ದೇಶಕ್ಕೂ ಎಲ್ಲಾ ಕಾಲಕ್ಕೂ ಒಂದೇ ಆಗಿರುವಂತೆಯೇ, ಮತ್ತು ಗಣಿತಶಾಸ್ತ್ರವು ಮುಂದೆ ಎಷ್ಟೇ ಬೆಳೆದರೂ ಈ ತತ್ತ್ವವು ಅಬಾಧಿತವಾಗಿಯೇ ಉಳಿದುಕೊಂಡಿರುವಂತೆ ಆಚಾರ್ಯರು ಉಪದೇಶಿಸಿರುವ ಪರಮಾರ್ಥವು ಕೂಡ ಎಂದಿಗೂ ಬಾಧಿತವಾಗತಕ್ಕದ್ದಲ್ಲ. ಆದ್ದರಿಂದಲೇ ಈ ಉಪದೇಶಗಳು ಯಾವದೇ ದೇಶ, ಕಾಲ, ಮತ, ಆಚಾರ, ಹವೆ–ಗಳಿಗೆ ಮೀರಿರುವವಾದ್ದರಿಂದ ಸರ್ವಸಮ್ಮತವಾದವುಗಳಾಗಿವೆ –ಎಂದು ಘಂಟಾಘೋಷವಾಗಿ ಹೆಸರಿಸಬಹುದಾಗಿದೆ.

---

# ವರುಣನ ಗರ್ವಭಂಗ

(ಪತ್ರಿಕಾಪಾಠಕ)

ಇತ್ತೀಚೆಗೆ ವೃತ್ತಾಂತಪತ್ರಿಕೆಗಳಲ್ಲಿ ಜಾಹಿರಾತುಪುಟಗಳೇ ಅಧಿಕವಾಗಿರುತ್ತವೆ. ಸುದ್ದಿಗಳಿಗಿಂತ ಹೆಚ್ಚು ಸ್ಥಲವನ್ನು ಜಾಹಿರಾತುಗಳೇ ಆಕ್ರಮಿಸಿಕೊಂಡಿರುತ್ತವೆ. ಅವುಗಳಲ್ಲಿಯೂ ಕೆಲವು ಸ್ವಾರಸ್ಯಕರವಾದ ತಲೆಬರಹಗಳೂ ವಾಕ್ಯಗಳೂ ಇರುತ್ತವೆ. ಅಂಥವುಗಳಲ್ಲೊಂದು ಈಗ ನಾನು ಉದಾಹರಿಸಿರುವ 'ವರುಣನ ಗರ್ವಭಂಗ' ಎಂಬುದೂ ಆಗಿದೆ. ಒಂದಾನೊಂದು ಟಾರ್ಪಾಲಿನ್ ಕಂಪನಿಯವರು ತಮ್ಮ ತಯಾರಿಕೆಯ ವಸ್ತುವೇ ಉತ್ಕೃಷ್ಟವಾದುದೆಂದೂ ಎಂಥ ಮಳೆಯಲ್ಲಿಯೂ ಪದಾರ್ಥಗಳು ನೆನೆಯದೆ ಇರಬೇಕಾದರೆ ತಮ್ಮ ಕಂಪನಿಯ ಟಾರ್ಪಾಲಿನ್‌ನ್ನು ಬಳಸಬೇಕೆಂದೂ ಅದೇ ವರುಣನ ಗರ್ವಭಂಗವೆಂದೂ ಸಾರಿರುತ್ತಾರೆ.

ಈಗಿನ ಕಾಲಕ್ಕೆ ಜನರಿಗೆ ಶಾಶ್ವತ, ಅಮೃತ, ನಿಜ, ಪ್ರಾಮಾಣಿಕ, ತಾಜಾ-ಮುಂತಾದ ಪದಗಳ ಬಳಕೆಯು ತೀರ ಅಗ್ಗವಾಗಿರುತ್ತದೆ. ಆದರೆ ಯಾವ ವಸ್ತುಗಳಿಗೆ ಅವುಗಳನ್ನು ವಿಶೇಷಣವಾಗಿ ಬಳಸಿರುತ್ತಾರೋ ಅವು ನಿಜವಾಗಿಯೂ ಹಾಗಿರುವವೆ? ಎಂಬುದನ್ನು ಪರೀಕ್ಷಿಸಿಯೇ ನೋಡಬೇಕಾಗಿರುತ್ತದೆ. ಉದಾಹರಣೆಗೆ ಒಂದು ಜೊತೆ ಪಂಚೆಯನ್ನು ತೆಗೆದುಕೊಳ್ಳಿರಿ. ಬಹಳ ಮಟ್ಟಿಗೆ ಅದರ ಮೇಲೆ Super Fine ಎಂದೇ ಮುದ್ರೆಯಿರುತ್ತದೆ. ಕೈಯಲ್ಲಿ ಹಿಡಿದು ನೋಡಿದರೆ ಮಾತ್ರ ಅದರ ಯೋಗ್ಯತೆ ತಿಳಿಯುತ್ತದೆ. ಹೀಗೆಯೇ 'ಗ್ಯಾರಂಟಿ' ಎಂಬ ಶಬ್ದವೂ ಎಲ್ಲಾ ವಸ್ತುಗಳ ಮೇಲೂ ಬಳಸಲ್ಪಟ್ಟದ್ದರ ಫಲವಾಗಿ ಆ ಶಬ್ದಕ್ಕೇ ಗ್ಯಾರಂಟಿಯಾದ ಅರ್ಥವಿಲ್ಲವಾಗಿಬಿಟ್ಟಿದೆ. ಈ ರೀತಿಯ ಕುಟಿಲವ್ಯವಹಾರದಿಂದ ನಾವು ಅಂತಃಕರಣವನ್ನು ಹೇಗೆ ಹದಗೆಡಿಸಿಕೊಂಡಿರುತ್ತೇವೆ-ಎಂಬಿದು ಕೂಡ ಜನರಿಗೆ ಲೆಕ್ಕಕ್ಕೆ ಬಾರದೆ ಇದೆ. ನಿಜವಾಗಿಯೂ ವಸ್ತುವಿನಲ್ಲಿ ಗುಣವಿರುವದಾದರೆ ಜಾಹಿರಾತು ಏಕೆ ಬೇಕು? ಏಳು ವರ್ಷದ ಬಾಲಕನಾದ ಶ್ರೀಕೃಷ್ಣನು ಗೋವರ್ಧನಪರ್ವತವನ್ನೆತ್ತಿ ನಂದಗೋಕುಲದವರನ್ನೆಲ್ಲ ಕಾಪಾಡಿದ್ದಲ್ಲದೆ ವರುಣನ ಗರ್ವಭಂಗವನ್ನು ಮಾಡಿದನೋ! ಲೂ ತನ್ನನ್ನು ತಾನು ಜಾಹಿರಾತುಮಾಡಿಕೊಳ್ಳಲಿಲ್ಲವೇಕೆ?

ಸುಭಾಷಿತಕಾರನೊಬ್ಬನ ಅಭಿಪ್ರಾಯವು ಹೀಗಿದೆ: ಮನುಷ್ಯನಲ್ಲಿ ಸದ್ಗುಣಗಳು ಇದ್ದುದೇ ಆದರೆ ಅವು ತಾವಾಗಿಯೇ ಹರಡಿಕೊಂಡುಬಿಡುತ್ತವೆ. ಹೇಗೆಂದರೆ ಕಸ್ತೂರಿ ಎಂಬ ವಸ್ತುವನ್ನು ಎಷ್ಟೇ ಬಚ್ಚಿಟ್ಟರೂ ಅದರ ಸುವಾಸನೆಯು ಹರಡಿಯೇ ತೀರುವದು. ಯಾರಾದರೂ ಹಟಕ್ಕಾಗಿ 'ಇದು ಸುವಾಸನೆಯಲ್ಲ'-ಎಂದು ಸಾರಿದರೂ ಅದು ಸುವಾಸನೆಯಲ್ಲದೆ ಹೋಗುವದಿಲ್ಲ. ಈ ಕವಿವಾಣಿಯಂತೆ ನಾವು ನಮ್ಮ ಸದ್ಗುಣಗಳನ್ನು ಬೆಳೆಸಿಕೊಳ್ಳಬೇಕೇ ಹೊರತು ಜಾಹೀರು ಮಾಡಿಕೊಳ್ಳಬೇಕಾದದ್ದಿಲ್ಲ.

# ಸಚ್ಚಿದಾನಂದಮನನ

(ಶ್ರೀ ಸಚ್ಚಿದಾನಂದೇಂದ್ರಸರಸ್ವತೀಸ್ವಾಮಿಗಳು)

೩೦೭. ಪೂರ್ಣಸಂನ್ಯಾಸವೆಂದರೆ ಪ್ರಪಂಚವೆಲ್ಲದರಲ್ಲಿಯೂ ಆಸ್ಥೆಯನ್ನು ಬಿಟ್ಟುಬಿಡುವದೇ ಆಗಿದೆ. ಪ್ರಪಂಚವನ್ನು ಯಾವದಾದರೊಂದು ಸ್ವಾರ್ಥದ ಪೂರ್ತಿಯನ್ನು ಮಾಡಿಕೊಳ್ಳುವದಕ್ಕೆ ಬೇಕಾದ ಸಾಮಗ್ರಿಯೆಂದು ಬಗೆಯುವವರಿಗೆ ಈ ಸಂನ್ಯಾಸವು ಎಂದಿಗೂ ದಕ್ಕಲಾರದು.

೩೦೮. ಪ್ರಪಂಚವು ಸಾಮಾನ್ಯರಿಗೆ ತ್ರೈಗುಣ್ಯದ ಮೂರ್ತಿಯಾಗಿ ಕಾಣುತ್ತಿರುವದು. ಇದನ್ನೇ ಭಗವಂತನು ಅರ್ಜುನನಿಗೆ **'ಮಾಯೆ'** ಎಂಬ ಹೆಸರಿನಿಂದ ಬೋಧಿಸಿರುತ್ತಾನೆ. ಈ ಮಾಯೆಯನ್ನು ದಾಟುವದು ತ್ರಿಗುಣಾತ್ಮಕವಾದ ಸ್ವಭಾವವುಳ್ಳವರಿಗೆ ಬಹಳ ಕಷ್ಟ. ತ್ರಿಗುಣವನ್ನು ಮೀರಿರುವವರೂ ಮೀರುವದಕ್ಕೆ ಪ್ರಯತ್ನಿಸುವವರೂ ಸಂನ್ಯಾಸಿಗಳು.

೩೦೯. ಸಾಮಾನ್ಯರಿಗೆ ಮಾಯಾರೂಪವಾಗಿ ಕಾಣಿಸಿಕೊಳ್ಳುತ್ತಿರುವ ಪ್ರಪಂಚವು ಮುಮುಕ್ಷುಗಳಿಗೆ ಮಾಯಾರೂಪದಿಂದ ಕಾಣಿಸಿಕೊಳ್ಳುವದಿಲ್ಲ. ಸ್ವಕರ್ಮದಿಂದ ಭಗವಂತನನ್ನು ಅರ್ಚನೆಮಾಡಬೇಕೆನ್ನುವ ಭಕ್ತಿಯೋಗಿಗಳಿಗೆ ಪ್ರಪಂಚವು ಭಗವಂತನ ವಿಭೂತಿಗಳಿಂದ ಪರಿಪೂರ್ಣವಾಗಿರುವಂತೆ ಕಾಣಿಸುತ್ತಿರುವದು. ಸರ್ವಸಂಗವನ್ನು ಪರಿತ್ಯಾಗಮಾಡಿ ಭಗವನ್ಮಯರಾಗಿರುವ ಸಂನ್ಯಾಸಿಗಳಿಗೊ, ಎಂದರೆ ಪ್ರಪಂಚವೆಲ್ಲವೂ ಭಗವಂತನೇ ಆಗಿರುವದು. ಏಕೆಂದರೆ 'ಇದೆಲ್ಲವೂ ಬ್ರಹ್ಮವೇ' ಎಂಬ ಶ್ರುತಿಬೋಧೆಯನ್ನು ಅವರು ಅನುಭವಕ್ಕೆ ತಂದುಕೊಂಡಿರುತ್ತಾರೆ.

೩೧೦. ಸಂನ್ಯಾಸವೆಂದರೆ ಸ್ವಾರ್ಥಸಾಧನೆಗಾಗಿ ಪ್ರಪಂಚದ ವ್ಯವಹಾರದಿಂದ ತಪ್ಪಿಸಿಕೊಂಡು ಹೋಗುವ ಕಳ್ಳಾಟವಲ್ಲ. ಅದು ಎಲ್ಲೆಲ್ಲಿಯೂ ಭಗವಂತನನ್ನು ಕಾಣುವ ಉತ್ತಮಸಾಧನೆಯನ್ನು ಕೈಗೊಳ್ಳುವದಕ್ಕೆಂದು ಮಾಡುವ ಸ್ವಾರ್ಥತ್ಯಾಗ.

೩೧೧. ಯಾವನು ಪರಬ್ರಹ್ಮದಲ್ಲಿಯೇ ಉಪರತನಾಗಿರುತ್ತಾನೋ ಯಾವನು ಅದರಿಂದ ಪಡೆಯಬೇಕಾಗಿರುವ ಪರಮಶಾಂತಿಯನ್ನು ಪಡೆದುಕೊಂಡಿರುತ್ತಾನೋ ಅವನ ನಡೆನುಡಿಗಳಲ್ಲಿ ಸರ್ವಭೂತಸಮತಾಬುದ್ಧಿಯ ಫಲವು ಕಾಣಿಸುತ್ತಿರುವದು. ಯಾರನ್ನೂ ಹಗೆಮಾಡದೆ ಎಲ್ಲರಲ್ಲಿಯೂ ಮಿತ್ರಭಾವದಿಂದದಿಂದಿರುತ್ತಾ ಎಲ್ಲರಲ್ಲಿಯೂ ಕರುಣೆಯನ್ನು ತೋರಿಸುತ್ತಿರುವ ಆ ಮಹಾತ್ಮನೇ ನಿಜವಾಗಿ ಪರಮಹಂಸಪರಿವ್ರಾಜಕನು. ಅವನಿಗೆ ನಾನು, ನನ್ನದು–ಎಂಬ ಭಾವನೆಗಳು ಎಂದಿಗೂ ಬರುವ ಹಾಗಿಲ್ಲ. ಆತನ ಸಾನ್ನಿಧ್ಯದಿಂದಲೂ ಆತನ ಸೇವೆಯಿಂದಲೂ ಅವನೊಡನೆ ಮಾಡುವ ಸಂಭಾಷಣೆಯಿಂದಲೂ ಜನರ ಜೀವನದ ಸಂತಾಪವು ಅಡಗಿ ಸುಖದ ಬೆಳದಿಂಗಳು ಎಲ್ಲೆಲ್ಲಿಯೂ ಹರಡಿಕೊಳ್ಳಲಿದೆ.

---

# ತ್ರೇಷಂ ಹ್ಯಸ್ಯ ಸ್ಥವಿರಸ್ಯ ನಾಮ

(ಅಧ್ಯಾತ್ಮವಿದ್ಯಾಪ್ರವೀಣ ಹೆಚ್. ಎಸ್. ಲಕ್ಷ್ಮೀನರಸಿಂಹಮೂರ್ತಿಗಳು)

ವಿಷ್ಣುಸೂಕ್ತದ ೫ನೆಯ ಮಂತ್ರವನ್ನು ಈಗ ವಿಚಾರಮಾಡಬೇಕಾಗಿದೆ :-

**ಓಂ॥ ನೂ ಮರ್ತೋದಯತೇ ಸನಿಷ್ಯನ್ ಯೋ ವಿಷ್ಣವ ಉರು ಗಾಯಾಯ ದಾಶತ್ । ಪ್ರಯಃ ಸತ್ರಾಚಾ ಮನಸಾ ಯಜಾತ ಏತಾವಂತಂ ನರ್ಯಮಾ ವಿವಾಸಾತ್ ॥ ೫ ॥**

''ಬಹಳವಾಗಿ ಸ್ತುತಿಸಲ್ಪಡುವ ವಿಷ್ಣುವಿಗೆ ಯಾವ ಮನುಷ್ಯನು ಧನವನ್ನು ಬಯಸುವವನಾಗಿ ಹವಿಸ್ಸುಗಳನ್ನು ಅರ್ಪಿಸುವನೋ ಅಂಥವನು ಕ್ಷಿಪ್ರವಾಗಿ (ಧನವನ್ನು ಹೊಂದುವನು); ಮತ್ತು ಯಾವನು ಮನಃಪೂರ್ವಕವಾಗಿ ಸ್ತೋತ್ರಮಾಡುತ್ತಾ ವಿಶೇಷವಾಗಿ ನರರಿಗೆ ಹಿತವನ್ನುಂಟುಮಾಡುವ (ವಿಷ್ಣುವನ್ನು) ಪೂಜಿಸುವನೋ ಅವನು ಸಹ ಬಹು ದೊಡ್ಡ ಪರಿಮಾಣದ ಐಶ್ವರ್ಯವನ್ನು ಪಡೆದುಕೊಳ್ಳುವನು''- ಎಂದು ಈ ಮಂತ್ರದ ಸರಳವಾದ ಅರ್ಥವು.

ಮಹಾವಿಷ್ಣುವು ಲಕ್ಷ್ಮೀಪತಿಯೆಂಬುದು ಪ್ರಸಿದ್ಧವು. ಕುಬೇರನು ಲಕ್ಷ್ಮೀಪುತ್ರನು. ಪುತ್ರನಾದವನಿಗೆ ತಾಯಿಯನ್ನು ಕಾಪಾಡುವದಷ್ಟೇ ಕೆಲಸವಾಗಿರುತ್ತದೆ. ಲೋಕದಲ್ಲಿರುವ ಬಹಳ ಜನ ಧನವಂತರು ಕುಬೇರರು ಮಾತ್ರವೇ ಆಗಿದ್ದಾರೆ. ಅಂಥವರಿಗೆ ಹಣಕ್ಕೆ ಹಣವನ್ನು ಕೂಡಿಸುವದು ತಿಳಿದಿದೆಯೇ ಹೊರತು ಅದನ್ನು ವಿನಿಯೋಗಮಾಡಿ ತಾವೂ ಸುಖಪಟ್ಟು ಇತರರನ್ನೂ ಸುಖಗೊಳಿಸುವ ವಿಧಾನವು ಗೊತ್ತಿರುವದಿಲ್ಲ. ಇಂಥ ಧನಾಭಿಮಾನವು ಯಾವ ಪುರುಷಾರ್ಥವನ್ನೂ ನೀಡಲಾರದು. ಆದರೆ ಮಾನವನು ವಿಷ್ಣುವಾಗಬೇಕು. ಆಗ ಅವನಿಗೆ ಧನವನ್ನೂ ಐಶ್ವರ್ಯವನ್ನೂ ಭೋಗಿಸುವ ಅಧಿಕಾರವು ದೊರಕುತ್ತದೆ. ಈಗಲೂ ಕೆಲವರು ಹಣವನ್ನು ನೀರಿನಂತೆ ಚೆಲ್ಲಬಹುದು. ಆದರೆ ಅದು ಸದ್ವಿನಿಯೋಗಕ್ಕಲ್ಲ. ಅಂಥ ಖರ್ಚುವೆಚ್ಚಗಳು ಅವರಿಗೆ ದುಃಖವನ್ನೂ ದುರಭಿಮಾನವನ್ನೂ ಅನಾರೋಗ್ಯವನ್ನೂ ಉಂಟುಮಾಡುವವು. ಇದೇನೂ ವಿಷ್ಣುತ್ವವನ್ನು ಪಡೆದ ಗುರುತಲ್ಲ. ವಿಷ್ಣುವು ಲಕ್ಷ್ಮಿಯನ್ನು ಹೇಗೆ ಅನುಭವಿಸುತ್ತಾನೆಂಬುದನ್ನು ಸರಿಯಾಗಿ ತಿಳಿದುಕೊಳ್ಳಬೇಕು. ಆತನು ತನ್ನ ಸಕಲ ಕಲ್ಯಾಣಗುಣಗಳಿಂದ ಆಕೆಗೆ ಅತ್ಯಂತ ಮೆಚ್ಚಿನವನಾದನು. ಆದ್ದರಿಂದಲೇ ಎಲ್ಲಾ ದೇವತೆಗಳನ್ನೂ ಬಿಟ್ಟು ಲಕ್ಷ್ಮಿಯು ವಿಷ್ಣುವನ್ನು ವರಿಸಿದಳು. ಐಶ್ವರ್ಯವೂ ಸದ್ಗುಣಗಳೂ ಒಂದೆಡೆಯಲ್ಲಿ ಕೂಡಿರುವದೇ ವಿಷ್ಣುತ್ವವು. ಜಗತ್ತಿನಲ್ಲಿ ಇದು ಅಪರೂಪವೇ ಸರಿ. ಪ್ರಕೃತ ಮಹಾವಿಷ್ಣುವು ದೇವತೆಗಳಲ್ಲೆಲ್ಲ ಪರಮನಾಗಿದ್ದು ತನ್ನ ಯಜ್ಞರೂಪವಾದ ಶರೀರದಿಂದ ಎಲ್ಲಾ ದೇವತೆಗಳನ್ನೂ ಪೋಷಿಸುತ್ತಾನೆ. ಅವರವರ ಯಜ್ಞಭಾಗವನ್ನು ಅವರವರಿಗೆ ಕೊಟ್ಟು ಜಗದ್ರಕ್ಷಣೆಗೆ ನಿಯಮಿಸುತ್ತಾನೆ. ತಾನು ಎಲ್ಲಕ್ಕೂ ಒಡೆಯನಾಗಿದ್ದು

ಜಗತ್ತಿನಲ್ಲಿರುವ ಧರ್ಮಿಷ್ಠರು, ತಪಸ್ವಿಗಳು, ಋಷಿಗಳು, ಭಕ್ತರುಗಳನ್ನೆಲ್ಲ ಉದ್ಧಾರಮಾಡುತ್ತಾನೆ. ಆಗಾಗ್ಗೆ ಪ್ರಪಂಚಕ್ಕೆ ಒದಗಬಹುದಾದ ವಿಪತ್ತುಗಳನ್ನು ಪರಿಹರಿಸುತ್ತಾನೆ. ಈ ಮಹಾಕರ್ಮಗಳಿಂದಲೂ ಗುಣಗಳ ಸಂಪತ್ತಿನಿಂದಲೂ ಕೂಡಿದ ವಿಷ್ಣುವಿನಲ್ಲಿಯೇ ಲಕ್ಷ್ಮಿಯು ಅನುರಕ್ತಳಾಗಿರುವದೇನೂ ಆಶ್ಚರ್ಯವಲ್ಲ. ಆದ್ದರಿಂದ ಮನುಷ್ಯರಲ್ಲಿ ಯಾರು ಧನವನ್ನು ಬಯಸುವರೋ ಅಂಥವರು ವಿಷ್ಣುವನ್ನೇ ಸ್ತುತಿಸಿ ಆತನಿಗೇ ಹವಿಸ್ಸನ್ನು ಅರ್ಪಿಸಬೇಕು. ಅವನು ಯಾವಾಗಲೂ ನರರಿಗೆ ಹಿತವನ್ನುಂಟುಮಾಡುವವನು. ನರರ ಪಾಪಗಳನ್ನು ಕಳೆಯುವ ನರಹರಿಯು. ಆತನು ಪ್ರಸನ್ನನಾದರೆ ಮಾತ್ರವೇ ಲಕ್ಷ್ಮಿಯು ಒಲಿಯುವಳು. ಆತನು ಶ್ರೀ-ಎಂದರೆ ಲಕ್ಷ್ಮಿಗೆ ನಿವಾಸನು-ಎಂದರೆ ವಾಸಸ್ಥಾನನು. ನಾವು ದುರಾಚಾರಿಗಳಾದರೆ ವಿಷ್ಣುವಿಗೆ ಶತ್ರುಗಳಾಗುವೆವು. ಹೇಗೆಂದರೆ ದುರಾಚಾರವೇ ರಾಕ್ಷಸತ್ವವು. ವಿಷ್ಣುವಿಗೆ ರಾಕ್ಷಸರನ್ನು ಕಂಡರೆ ಆಗುವದಿಲ್ಲ. ಆದ್ದರಿಂದ ಭಕ್ತಿಶ್ರದ್ಧಾಪೂರ್ವಕವಾಗಿ ವಿಷ್ಣುಯಾಗವನ್ನು ಮಾಡಿ ವಿಷ್ಣುವಿನ ಭಕ್ತರಾದರೆ ನಾವು ಹಿತವೂ ಸುಖಕರವೂ ಆದ ಲಕ್ಷ್ಮಿಯನ್ನು ಪಡೆದು ಅನುಭವಿಸಬಹುದಾಗಿದೆ. ವಿಷ್ಣುಭಕ್ತನು ಯಾವಾಗಲೂ ಬಡವನಾಗುವದಿಲ್ಲ. •ಅವನು ದೊಡ್ಡ ಐಶ್ವರ್ಯಾದಿವಿಭೂತಿಗಳನ್ನು ಹೊಂದಿ ಸುಖಿಸುವನು-ಎಂದು ಈ ಮಂತ್ರದಲ್ಲಿ ತಿಳಿಸಿದೆ.

ಈಗ ನಲವತ್ತನೆಯ ಮಂತ್ರವನ್ನು ವಿಚಾರಮಾಡೋಣ :

**ಓಂ ॥ ತ್ವಂ ವಿಷ್ಣೋ ಸುಮತಿಂ ವಿಶ್ವಜನ್ಯಾಮಪ್ರಯುತಾಮೇವಯಾವೋ ಮತಿಂ ದಾಃ । ಪರ್ಚೋ ಯಥಾ ನಃ ಸುವಿತಸ್ಯ ಭೂರೇರಶ್ವಾವತಃ ಪುರಶ್ಚಂದ್ರಸ್ಯ ರಾಯಃ ॥ ೪೦ ॥**

'ಎಲೈ, ಸ್ತೋತೃಗಳಿಗೆ ಇಷ್ಟಾರ್ಥದಾಯಕನಾದ ವಿಷ್ಣುವೆ, ನೀನು ದೋಷರಹಿತವೂ ಸಕಲರಿಗೂ ಹಿತಕರವಾದದ್ದೂ ಆದ ಸದ್ಬುದ್ಧಿಯನ್ನು ನಮಗೆ ಕೊಡುವವನಾಗು. ಹಾಗೆಯೇ ಅಶ್ವಾದಿಗಳಿಂದ ಕೂಡಿದ ಮತ್ತು ಬಹುಜನರಿಗೆ ಆನಂದಕರವಾದ ಐಶ್ವರ್ಯದ ಪ್ರಾಪ್ತಿಯು ನಮಗೆ ಹೇಗೆ ದೊರಕಬಹುದೋ ಹಾಗೆ ದಯಪಾಲಿಸುವವನಾಗು' ಎಂದು ಈ ಮಂತ್ರದ ಸರಳವಾದ ಅಭಿಪ್ರಾಯವು.

ಇಲ್ಲಿ ಸದ್ಬುದ್ಧಿ ಹಾಗೂ ಸರ್ವೋಪಯೋಗಿಯಾದ ಐಶ್ವರ್ಯದ ಪ್ರಾರ್ಥನೆಯನ್ನು ಮಾಡಲಾಗಿದೆ. ವಿಷ್ಣುವು ಸತ್ವಗುಣಸಂಪನ್ನನು. ಆದ್ದರಿಂದಲೇ ಆತನ ಬುದ್ಧಿಯು ಸದ್ಬುದ್ಧಿಯೆನಿಸಿರುವದು. ದೇವತೆಗಳಲ್ಲಿ ವಿಷ್ಣುವಿಗಿಂತ ಕ್ಷಮಾಶೀಲರಾಗಲಿ, ಉದಾರಿಗಳಾಗಲಿ, ಜಾಣರಾಗಲಿ ಯಾರೂ ಇರುವದಿಲ್ಲ. ಅನೇಕ ಸಂದರ್ಭಗಳಲ್ಲಿ ವಿಷ್ಣುವಿನ ಬುದ್ಧಿಚಾತುರ್ಯದಿಂದ ಜಗತ್ತಿಗೆ ಒದಗಿದ್ದ ವಿಪತ್ತುಗಳು ಪರಿಹಾರವಾಗಿರುವದನ್ನು ಪುರಾಣಗಳಲ್ಲಿ ನೋಡಬಹುದು. ಈತನು ಕೈಗೊಳ್ಳುವ ಕಾರ್ಯಗಳೂ ಸಹ ಸಕಲರಿಗೂ ಹಿತಕರವಾದುದು. ಆದ್ದರಿಂದ ಈತನನ್ನು ಭಜಿಸಿದವರಿಗೂ ದೋಷರಹಿತವೂ ಸರ್ವರ ಕಲ್ಯಾಣಕ್ಕೂ ಕಾರಣವಾ

ದದ್ದೂ ಆಗಿರುವ ಬುದ್ಧಿಯುಂಟಾಗಲಿದೆ. ಈಗಿನ ಕಾಲಕ್ಕೆ ಜನರಿಗೆ ಸದ್ಬುದ್ಧಿಯ ಬಡತನವು ಬಹಳ ಹೆಚ್ಚಾಗಿದೆ. ಅದರ ದಾರಿದ್ರ್ಯದಿಂದಲೇ ಅನೇಕ ಸಮಸ್ಯೆಗಳು ಉದ್ಭವಿಸಿರುತ್ತವೆ. ನಿಜವಾಗಿಯೂ ವಿಷ್ಣುಪ್ರಸಾದದಿಂದ ಮಾನವರೆಲ್ಲರಿಗೂ ಸದ್ಬುದ್ಧಿಯುಂಟಾದರೆ ಕೋರ್ಟು ಕಛೇರಿಗಳೂ ಪೋಲೀಸು ಮಿಲಿಟರಿ ಇಲಾಖೆಗಳೂ ಕೃಶವಾಗಿಯೇ ತೀರುತ್ತವೆ. ಆದರೆ ವಿಷ್ಣುವನ್ನು ಭಜಿಸದವರಿಗೆ ಸದ್ಬುದ್ಧಿಯುಂಟಾಗುವ ಸಂಭವವಿಲ್ಲ. ಅದಕ್ಕಾಗಿಯೇ ಈ ಮಂತ್ರದ್ರಷ್ಟಾರನಾದ ಋಷಿಯು ಸಾಮೂಹಿಕವಾಗಿ ನಮ್ಮೆಲ್ಲರಿಗೂ ಸದ್ಬುದ್ಧಿಯನ್ನು ನೀಡಬೇಕೆಂದು ಬೇಡಿಕೊಂಡಿರುತ್ತಾನೆ. ಒಳ್ಳೆಯ ಬುದ್ಧಿಯೆಂಬ ಐಶ್ವರ್ಯಕ್ಕಿಂತ ಮಿಗಿಲಾದುದಿಲ್ಲ. ಇದು ಕ್ಷೀಣವೂ ಆಗುವದಿಲ್ಲ. ಮಾನವನು ಒಮ್ಮೆ ಸದ್ಬುದ್ಧಿಸಂಪನ್ನನಾದರೆ ಸಾಕು. ಅಲ್ಲಿಂದ ಅದೇ ಬುದ್ಧಿಯೇ ಅವನಿಗೆ ಒಗ್ಗಿಹೋಗುತ್ತದೆ. ಅನಂತರ ಅವನೆಂದೂ ದುರ್ಬುದ್ಧಿಯವನಾಗುವದಿಲ್ಲ. ಉಪಯೋಗಿಸಿದಂತೆಲ್ಲ ಸದ್ಬುದ್ಧಿಯು ಬೆಳೆಯುತ್ತದೆ. ಹೀಗೆ ಜಗತ್ತಿಗೆ ಒಳ್ಳೆಯ ಬುದ್ಧಿಯ ಸಜ್ಜನರ ಆವಶ್ಯಕತೆ ಬಹಳವಾಗಿದೆ. ಈಗಲೂ ಕೆಲವರಾದರೂ ಸಜ್ಜನರಿರುವದರಿಂದಲೇ ಮಳೆಬೆಳೆಗಳೂ ಪ್ರಜಾಕ್ಷೇಮವೂ ನೆಲಸಿದೆ. ಆದ್ದರಿಂದ ನಾವು ಇನ್ನು ಮುಂದೆ ಸದ್ಬುದ್ಧಿಯನ್ನು ಹೆಚ್ಚು ಹೆಚ್ಚಾಗಿ ದಯಪಾಲಿಸುವಂತೆ ವಿಷ್ಣುವಿನಲ್ಲಿ ಬೇಡಿಕೊಳ್ಳೋಣ. ಸದ್ಬುದ್ಧಿ ಯಾವದು? ದುರ್ಬುದ್ಧಿ ಯಾವದು ? ಎಂಬುದು ಗೊತ್ತಾಗುವದಿಲ್ಲವಲ್ಲ ! ಎಂದು ಯಾರೂ ಪೇಚಾಡಬೇಕಾಗಿಲ್ಲ. ನಮ್ಮ ಯಾವ ಆಲೋಚನೆಗಳು ನಮಗೂ ಇತರರಿಗೂ ಹಿತವನ್ನುಂಟುಮಾಡಿ ನಮ್ಮನ್ನು ವಿಷ್ಣುಸ್ಮರಣೆಯಿಂದ ಜಾರದಂತೆ ಕಾಪಾಡುವವೋ ಅವೇ ಸದ್ಬುದ್ಧಿಗಳು. ಉಳಿದವುಗಳೆಲ್ಲ ದುರ್ಬುದ್ಧಿಗಳೆಂದೇ ತಿಳಿಯಬೇಕು.

ಇನ್ನು ಐಶ್ವರ್ಯವನ್ನು ಕುರಿತು ಇಲ್ಲಿ ಪ್ರಾರ್ಥಿಸಿರುವದು ಸೂಕ್ತವಾಗಿದೆ. ಉತ್ತಮ ಬುದ್ಧಿವಂತನಿಗೆ ಹಾಗೂ ಮೇಧಾಸಂಪನ್ನನಿಗೆ ಐಶ್ವರ್ಯವು ದೊರೆತರೆ ಅದು ಖಂಡಿತವಾಗಿ ಸದ್ವಿನಿಯೋಗವಾಗುವದು. ಹಿಂದಿನ ಕಾಲಕ್ಕೆ ಪ್ರಜೆಗಳನ್ನಾಳುತ್ತಿದ್ದ ರಾಜಮಹಾರಾಜರುಗಳೆಲ್ಲರೂ ಸಜ್ಜನರಾಗಿರುತ್ತಿದ್ದರು. ಸೂರ್ಯ, ಚಂದ್ರ–ವಂಶದ ದೊರೆಗಳ ಕಥೆಗಳನ್ನು ಕೇಳಿದರೆ ಈ ವಿಷಯವು ಸ್ಪಷ್ಟವಾಗುವದು. ಅವರುಗಳು ತಮ್ಮ ಐಶ್ವರ್ಯವನ್ನೆಲ್ಲ ಪ್ರಜಾಕ್ಷೇಮಕ್ಕಾಗಿಯೇ ವಿನಿಯೋಗಿಸುತ್ತಿದ್ದರು. ರಾಜರುಗಳನ್ನು ವಿಷ್ಣುವಿನ ಅಂಶಸಂಭೂತರೆಂದೇ ಗೌರವಿಸಲಾಗುತ್ತಿತ್ತು. ಹೀಗೆ ಯಾರಿಗಾದರೂ ಸರಿ. ಮೊದಲು ಸದ್ಬುದ್ಧಿಯುಂಟಾಗಿ ಅನಂತರ ಐಶ್ವರ್ಯವು ದೊರೆತಾಗ ಜಗತ್ತಿಗೂ ವ್ಯಕ್ತಿಗೂ ಕ್ಷೇಮವಾಗುವದು. ಮೇಧಾವಂತನಲ್ಲದವನಿಗೆ ದೊರಕುವ ಸಂಪತ್ತು ಅನರ್ಥಕ್ಕೇ ಕಾರಣವೆಂದು ಶ್ರೀಶಂಕರಾಚಾರ್ಯರು ತಿಳಿಸಿದ್ದಾರೆ. ಆದ್ದರಿಂದ ನಾವು ಭಗವಂತನಲ್ಲಿ ಸದ್ಬುದ್ಧಿಯನ್ನೂ ಜೀವನೋಪಾಯದ ಪ್ರಯತ್ನಗಳನ್ನೂ ಜೊತೆಜೊತೆಯಾಗಿಯೇ ಪ್ರಾಮಾಣಿಕವಾಗಿ ಕೇಳಿಕೊಳ್ಳಬೇಕು. ಆಗಲೇ ನಾವು ಇಹಪರಗಳಲ್ಲಿ ಸುಖಿಗಳಾಗಿ ಬಾಳುವೆವು. ಅಂಥ ಪ್ರಾರ್ಥನೆಯನ್ನು ಈ ಮಂತ್ರದಲ್ಲಿ ಮಾಡಲಾಗಿದೆ.

ಈಗ ನಲವತ್ತೊಂದನೆಯ ಮಂತ್ರವನ್ನು ವಿಚಾರಮಾಡೋಣ :

**ಓಂ ॥ ತ್ರಿರ್ದೇವಃ ಪೃಥಿವೀಮೇಷ ಏತಾಂ ವಿಚಕ್ರಮೇ ಶತರ್ಚಸಂ ಮಹಿತ್ವಾ । ಪ್ರ ವಿಷ್ಣುರಸ್ತು ತವಸಸ್ತವೀಯಾನ್ ತ್ವೇಷಂ ಹ್ಯಸ್ಯ ಸ್ಥವಿರಸ್ಯ ನಾಮ ॥ ೪೧ ॥**

'ಈ (ದಾನಶೂರನಾದ) ದೇವನು ನೂರುಗಟ್ಟಲೆಯ ಮಹಿಮೆಯುಳ್ಳ ಪೃಥಿವ್ಯಾದಿಲೋಕತ್ರಯಗಳನ್ನು ಮಹತ್ತಾದ ತನ್ನ ಮಹಿಮೆಯಿಂದ ಆಕ್ರಮಿಸಿದನು. ವೃದ್ಧರಲ್ಲೆಲ್ಲ ಅತಿವೃದ್ಧನಾದ ಈತನು ನಮಗೆ ಯಜಮಾನನಾಗಿರಲಿ; ಏಕೆಂದರೆ ಇವನ 'ವಿಷ್ಣು'ವೆಂಬ ಹೆಸರೇ ಎಲ್ಲರಿಗೂ ಹಿರಿಯನೆಂಬುದನ್ನು ತಿಳಿಸಲು ಪ್ರಭವಿಷ್ಣು(ಸಮರ್ಥ)ವಾಗಿರುತ್ತದೆ' ಎಂದು ಈ ಮಂತ್ರದ ಅಭಿಪ್ರಾಯವು.

ದಾನವನ್ನು ತೆಗೆದುಕೊಳ್ಳಲು ಬಂದವನು ದಾನಶೂರನು ಹೇಗಾದಾನು? ಎಂದು ಯಾರಾದರೂ ಕೇಳಬಹುದು. ಆದರೆ ವಿಷ್ಣುವು ವಾಮನನಾಗಿ ತಾನು ಸ್ವೀಕರಿಸಿದ ತ್ರಿಲೋಕಗಳನ್ನೂ ದೇವೇಂದ್ರಾದಿಗಳಿಗೇ ಕೊಟ್ಟುಬಿಟ್ಟನು. ತನಗಾಗಿ ಏನನ್ನೂ ಉಳಿಸಿಕೊಳ್ಳಲಿಲ್ಲ. ಆದ್ದರಿಂದಲೇ ಇವನು ದಾನಿಯೆನಿಸಿ ದೇವನಾದನು. ಈತನ ತ್ರಿವಿಕ್ರಮರೂಪದ ಮಹಿಮೆಯನ್ನು ಈಗಾಗಲೇ ವರ್ಣಿಸಿದ್ದಾಗಿದೆ. ಇನ್ನು ಈತನು ವೃದ್ಧನೆಂಬುದನ್ನು ನೋಡೋಣ. ಮುದುಕರನ್ನು ವೃದ್ಧರೆಂದು ಕರೆಯುವದು ಲೋಕದಲ್ಲಿ ವಾಡಿಕೆ. ಆ ಅರ್ಥದಲ್ಲಿ ಈತನು ವೃದ್ಧನಲ್ಲ. ಮತ್ತೇನೆಂದರೆ ಷಡ್ಗುಣೈಶ್ವರ್ಯಸಂಪತ್ತುಗಳಿಂದ ಪರಿಪೂರ್ಣನಾದ್ದರಿಂದ ವೃದ್ಧನು. ಆದ್ದರಿಂದಲೇ ಎಲ್ಲರಿಗೂ ಪ್ರಭುವು. ಈತನನ್ನು ವಿಷ್ಣು, ಜಿಷ್ಣು, ಮಹಾವಿಷ್ಣು, ಪ್ರಭವಿಷ್ಣು–ಎಂದೆಲ್ಲ ಭೀಷ್ಮಾಚಾರ್ಯರು ಸ್ತುತಿಸಿರುತ್ತಾರಲ್ಲವೆ? ಈತನು ಪುರುಷೋತ್ತಮನಲ್ಲವೆ? ರಾಜಸೂಯಯಾಗದಲ್ಲಿ ಅಗ್ರಪೂಜೆಯನ್ನು ಸ್ವೀಕರಿಸಿದವನು ಈತನೇ ಅಲ್ಲವೆ? ವಿಷ್ಣುಶಬ್ದವೇ ಈ ಅರ್ಥಗಳನ್ನೆಲ್ಲ ಕೊಡಲು ತಕ್ಕುದಾಗಿದೆ. ಆದ್ದರಿಂದ ನಮಗೆಲ್ಲ ಈತನೇ ಪ್ರಭುವೂ ಒಡೆಯನೂ ಆಗಿರಲಿ! ಎಂದಭಿಪ್ರಾಯ.

ಇನ್ನು ಈತನ 'ನಾಮ'ಮಹಿಮೆಯನ್ನು ನೋಡೋಣ. ವೇದದಲ್ಲಿ ಭಗವನ್ನಾಮಕೀರ್ತನೆಯ ವಿಷಯಕ್ಕೆ ಪರಾಮರ್ಶವಿದೆಯೆ? ಎಂದು ಕೇಳುವ ವೈದಿಕರಿಗೆ ಈ ಮಂತ್ರವು ಉತ್ತರವನ್ನು ಕೊಡುತ್ತಿದೆ. ಹೇಗೆಂದರೆ ಈ ವಿಷ್ಣುವೆಂಬ ನಾಮವೇ 'ತ್ವೇಷಮ್'– ದೀಪ್ತಮ್, ವಿರಾಜಮಾನವಾಗಿದೆ– ಎಂದರ್ಥ. ಆದ್ದರಿಂದ ಜನಸಾಮಾನ್ಯರಿಗೆ ಭಗವಂತನ ರೂಪವನ್ನು ಕಾಣಲಾಗದಿದ್ದರೂ 'ನಾಮ'ವು ಸುಲಭಪ್ರಾಪ್ತವಾಗಿದೆ. ಕಲಿಯುಗದಲ್ಲಿ ನಾಮಕೀರ್ತನೆಯೇ ಸಾಕೆಂದು ಋಷಿಮುನಿಗಳು ಅಭಿಪ್ರಾಯಪಟ್ಟಿದ್ದಾರೆ. ಮಹಾತ್ಮರುಗಳೂ ಸಮರ್ಥಿಸಿದ್ದಾರೆ. ಯಶೋವಂತವಾದ ವಿಷ್ಣುನಾಮವು ನಮಗೆಲ್ಲ ದಕ್ಕಿದರೆ ಭಗವಂತನೇ ದೊರಕಿದಂತೆ–ಎಂದಭಿಪ್ರಾಯ. ಭಗವನ್ನಾಮಕ್ಕೆ ಮಂಗಳವಾಗಲಿ.

# ನಿರಶನಾರ್ಕವಾರವ್ರತ-೧

(ಅಧ್ಯಾತ್ಮವಿದ್ಯಾಪ್ರವೀಣ ಶ್ರೀ ಕೆ. ಜಿ. ಸುಬ್ರಾಯಶರ್ಮರು, ಬೆಂಗಳೂರು)

ವಾರವ್ರತಗಳಲ್ಲಿ ಪ್ರಥಮವಾಗಿ ಪ್ರಾಪ್ತವಾಗುವ ಭಾನುವಾರವ್ರತವನ್ನು ಈಗ ವಿಚಾರಮಾಡೋಣ. ಇದು ಸೂರ್ಯದೇವತಾಪರವಾದ ವ್ರತವು. ಭೌತಿಕ ವಿಜ್ಞಾನದ ತಿಳಿವಳಿಕೆಯಂತೆ ಸೂರ್ಯನೆಂದರೆ ಒಂದು ಉರಿಯುವ ಗೋಳವು ಮಾತ್ರ– ಎಂಬಿಷ್ಟನ್ನೇ ಆಸ್ತಿಕರು ಒಪ್ಪುವದಿಲ್ಲ. ಅದಕ್ಕೂ ಮೀರಿ ದೇವತಾರೂಪದಿಂದ ಸೂರ್ಯನು ಇರುತ್ತಾನೆಂದು ಭಾವಿಸುತ್ತಾರೆ. ಇನ್ನೂ ಮುಂದುವರೆದು ಸೂರ್ಯಮಂಡಲಾಂತರ್ಗತನಾದ ಹಿರಣ್ಮಯಪುರುಷನೆಂಬವನು ನಾರಾಯಣನೇ– ಎಂದೂ ಧ್ಯಾನಿಸುತ್ತಾರೆ. ಆದ್ದರಿಂದ ಆಸ್ತಿಕ್ಯಬುದ್ಧಿಯುಳ್ಳವರಿಗೆ ಮಾತ್ರ ಈ ವ್ರತವು ಉಪಯೋಗವಾಗುವದು. ಪ್ರಕೃತ ಈ ವ್ರತವನ್ನು ಮೂರು ದಿನಗಳ ನಿಯಮಪುರಸ್ಸರವಾಗಿ ಮಾಡಬೇಕೆಂದು ಹೇಳಿದೆ. ಶನಿವಾರ ಒಪ್ಪತ್ತು ಊಟ ಮಾಡಿ ಭಾನುವಾರ ಪೂರ್ತಿ ಉಪವಾಸವಿದ್ದು ವ್ರತಾನುಷ್ಠಾನವನ್ನು ಮಾಡಿ ಸೋಮವಾರ ಪಾರಣೆಮಾಡಬೇಕೆಂದು ತಿಳಿಸಿದೆ. ಇದನ್ನು ಪ್ರಾರಂಭಿಸುವಾಗ ಮಾಘಮಾಸದ ಮೊದಲನೆಯ ಭಾನುವಾರವು ಶ್ರೇಷ್ಠವೆಂದು ಹೇಳಿದೆ. ವ್ರತಾಧಿದೇವತೆಯನ್ನು 'ಸೂರ್ಯ'ನೆಂದು ಸಾಧಕನು ಚಿಂತಿಸಬೇಕು. ಹೆಚ್ಚಿನ ಆಧ್ಯಾತ್ಮಿಕಾರ್ಥಗಳನ್ನು ಅನಂತರ ತಿಳಿಯಬಹುದು. ಪೌ ರಾ ಣಿ ಕ ರ ವರ್ಣನೆಯಂತೆ ಸೂರ್ಯನು ಪ್ರತಿದಿನವೂ ಪೂರ್ವದಿಂದ ಪಶ್ಚಿಮಕ್ಕೆ ಸಂಚರಿಸುವ ಜ್ಯೋತಿರ್ಮಯನಾದ ದೇವತೆ. ಈತನು ಏಕಾಕಿಯು. ಆದ್ದರಿಂದ ಇವನ ಕಾರ್ಯಸಾಧನೆಗಾಗಿ ಸೃಷ್ಟಿಯ ಆದಿಯಲ್ಲಿಯೇ ಬ್ರಹ್ಮನು ಕೆಲವು ಸೌಕರ್ಯಗಳನ್ನು ಒದಗಿಸಿರುತ್ತಾನೆ. ಅವು ಯಾವವೆಂದರೆ ಒಂದೇ ಚಕ್ರದ ಒಂದು ರಥ. ಅದಕ್ಕೆ ಏಳು ಕುದುರೆಗಳು. ಅರುಣನೆಂಬ ತೊಡೆಯಿಲ್ಲದ ಸಾರಥಿ. ಜೊತೆಗೆ ಈತನನ್ನು ಹೊಗಳುವ ಹಾಗೂ ಸಂತೋಷಗೊಳಿಸುವ ಕೆಲವು ಗಂಧರ್ವಾಪ್ಸರನಾಗದೇವತೆಗಳ ಪರಿವಾರ. ವಾಲಖಿಲ್ಯರೆಂಬ ಸ್ತುತಿಸುವ ಋಷಿಗಳ ಗುಂಪು– ಇತ್ಯಾದಿ. ಈ ಪರಿಚಯದಂತೆ ಸೂರ್ಯ ಭಗವಂತನನ್ನು ತೇಜೋಮಂಡಲದಲ್ಲಿ ನಾವು ಭಾವಿಸಿಕೊಳ್ಳಬೇಕು. ಅನಂತರ ಅದೇ ದೇವನನ್ನು ಒಂದಾನೊಂದು ವಿಶಿಷ್ಟವಾದ ಗೆರೆಗಳು, ಬೀಜಾಕ್ಷರಗಳಿಂದ ಕೂಡಿದ ದುಂಡಾದ ಮಂಡಲದಲ್ಲಿ ಕಲ್ಪಿಸಿಕೊಳ್ಳಬೇಕು. ಇಲ್ಲವಾದರೆ ಕೋಟ್ಯಂತರ ಮೈಲುಗಳ ದೂರದಲ್ಲಿರುವ ಅವನನ್ನು ಪೂಜಿಸುವದಾಗಲಿ, ಪ್ರದಕ್ಷಿಣನಮಸ್ಕಾರಗಳಿಂದ ಆರಾಧಿಸುವದಾಗಲಿ ಹೇಗೆ ಸಾಧ್ಯವಾದೀತು ? ಕರ್ಮೋಪಾಸನೆಗಳಲ್ಲೆಲ್ಲ ಪ್ರತೀಕ-ಪ್ರತಿಮಾದಿಗಳ ಉಪಯೋಗವು ಕಡ್ಡಾಯವಾಗಿದ್ದೇ ಇರುತ್ತದೆಯೆಂಬುದು ಬಲ್ಲವರಿಗೆ ಈಗಾಗಲೇ ತಿಳಿದಿದೆಯಷ್ಟೆ. ಹೀಗೆ ಸೂರ್ಯನನ್ನು ಆರಾಧ್ಯದೈವವಾಗಿ ಮಾಡಿಕೊಂಡು ಆರಾಧಕನು ಶ್ರದ್ಧಾ-ವಿತ್ತ-ವಿಧಿಗಳಿಂದ ಬಳಿಸಾರಲು ಸಿದ್ಧನಾಗಬೇಕು. ಪ್ರತ್ಯಕ್ಷದೇವತೆಯಾದ ಸೂರ್ಯನ ವಿಷಯಕ್ಕೆ ಯಾರಿಗೂ ಸಂಶಯಾದಿಗಳಿರುವಂತಿಲ್ಲ.

ಈಗ ಈ ವ್ರತವನ್ನು ಯಾರು ಮಾಡಬೇಕು ? ಏತಕ್ಕಾಗಿ ಮಾಡಬೇಕು ? ಎಂಬಿದನ್ನು 'ಮದನರತ್ನ'- ಎಂಬ ಗ್ರಂಥದಲ್ಲಿ ತಿಳಿಸಿರುತ್ತಾರೆ. ವ್ರತಗಳೆಲ್ಲವೂ ಕಾಮ್ಯ- ಎ ೦ ದ ರೆ ಒಂದಾನೊಂದು ಬಯಕೆಯ ಪರಿಪೂರ್ತಿಗಾಗಿ ಎಂಬಿದು ಸಾಮಾನ್ಯನಿಯಮವಾಗಿರುತ್ತದೆ. ಜೊತೆಗೆ ಪಾಪಪರಿಹಾರವೂ ಉದ್ದೇಶವಾಗಿರುತ್ತದೆ. ಅದರಂತೆ ಈ ವ್ರತವನ್ನು ಸ್ತ್ರೀಯರಲ್ಲಿ ಕನ್ನೆಯಾಗಲಿ, ಸುಮಂಗಲಿಯಾಗಲಿ, ವಿಧವೆಯಾಗಲಿ ಯಾರಾದರೂ ಮಾಡಬಹುದು. ಸುಮಂಗಲಿಯಾದರೆ ಗಂಡನೊಡಗೂಡಿ ಮಾಡಬೇಕು. ಗಂಡಸರು ಸಹ ಎಲ್ಲರೂ ಮಾಡಬಹುದು. ವಿಶೇಷವಾಗಿ ಕಣ್ಣುರೋಗವುಳ್ಳವರು, ಆಗಾಗ್ಗೆ ಕಾಯಿಲೆಗಳಿಂದ ನರಳುವವರು, ದೀರ್ಘರೋಗಗಳು ಅಂಟಿದವರು– ಯಾರಾದರೂ ಸರಿ, ತಮ್ಮ ಸಂಕಟಪರಿಹಾರಕ್ಕಾಗಿ ಮಾಡಬಹುದು. ಸ್ತ್ರೀಯರಿಗೆ ವಿಶೇಷವಾಗಿ ಋತುಧರ್ಮದ ದೋಷಪರಿಹಾರಕ್ಕೂ ಇದು ಉಪಯೋಗವಾಗಲಿದೆ–ಎಂದು ವ್ರತನಿಬಂಧದಲ್ಲಿ ತಿಳಿಸಿದೆ. ಯಾರೇ ಆಗಲಿ ಶಾರೀರಕ, ವಾಚಿಕ, ಮಾನಸಿಕ–ಪಾಪಗಳ ನಿವೃತ್ತಿಗಾಗಿ ಮತ್ತು ಅಜ್ಞಾನದಿಂದ ಮಾಡಿದ ಪರಸ್ತ್ರೀ-ಪರಪುರುಷ-ದರ್ಶನಸ್ಪರ್ಶನಾದಿಗಳು, ನಿಷಿದ್ಧದಿನಗಳಲ್ಲಿ ಆಚರಿಸಿದ ಕಾಮಕ್ರೀಡಾವಿನೋದಗಳಿಂದ ಸಂಭವಿಸಿದ ಪಾಪಗಳು, ಋತುಕಾಲದಲ್ಲಿ ನಿಯಮಭಂಗಮಾಡಿದ್ದರೆ ಅಂಥ ದೋಷಗಳು– ಹೀಗೆ ಸಮಯಾನುಸಾರ ಎಲ್ಲಾ ರೀತಿಯ ಪಾಪಗಳ ಪರಿಹಾರಕ್ಕಾಗಿ ಈ ವ್ರತವು ಹೇಳಲ್ಪಟ್ಟಿದೆ. ಆದ್ದರಿಂದ ಪಾಪಭೀತಿಯುಳ್ಳವರೂ ರೋಗಿಗಳೂ ಚಿಂತಾಗ್ರಸ್ತರೂ ಇದಕ್ಕೆ ಅಧಿಕಾರಿಗಳೆನ್ನಬಹುದು.

ಈಗ ವ್ರತವಿಧಾನವನ್ನು ನೋಡೋಣ. ಉಳಿದ ಎಲ್ಲಾ ವ್ರತಗಳಂತೆ ಸಾಮಗ್ರಿಗಳನ್ನು ಸಿದ್ಧಗೊಳಿಸಿಕೊಂಡು ಮಂಡಲವನ್ನು ಬರೆದು ತಾಮ್ರಪೀಠವನ್ನಿಟ್ಟು ಅದರ ಮೇಲೆ ಸೂರ್ಯಯಂತ್ರವನ್ನಿಟ್ಟುಕೊಂಡು ಪೂಜಾರಂಭಮಾಡಬೇಕು. ಗಣಪತಿಯ ಪೂಜೆಯಾದಮೇಲೆ ಅರುಣನ ಪೂಜೆಯನ್ನು ಮಾಡಬೇಕು. ಏಕೆಂದರೆ ಅರುಣೋದಯವಾದ ಅನಂತರವೇ ಸೂರ್ಯೋದಯವಾಗಲಿದೆ. ಅರುಣನನ್ನು ಸೂರ್ಯನ ಸಾರಥಿಯೆಂದೂ ಕರೆದಿದೆ. ಈತನು ವಿನುತಾ– ಎಂಬಾಕೆಯ ಮಗ. ಸೂರ್ಯನ ರಥದ ಏಳು ಕುದುರೆಗಳ ಲಗಾಮನ್ನು ಹಿಡಿದಿರುವವನು. ಕಶ್ಯಪಋಷಿಗಳ ಪುತ್ರನೂ ಹೌದು. ಸರ್ವಾಭರಣಾಲಂಕೃತನು. ಈತನ ಪೂಜೆಯೂ ಸಹ ವ್ರತಗ್ರಂಥದಲ್ಲಿ ವಿವರವಾಗಿದೆ. ಇವನ ಪೂಜಾನಂತರ ಸೂರ್ಯನ ಪೂಜೆಗಾಗಿ ಈತನ ಅಪ್ಪಣೆಯನ್ನು ಪಡೆಯಬೇಕು.

ಇನ್ನು ಮುಂದೆ ಸೂರ್ಯನಾರಾಯಣನನ್ನು ಮಂತ್ರಗಳಿಂದ ಆಹ್ವಾನಿಸಿ ಕರೆದು ಕುಳ್ಳಿರಿಸಬೇಕು. ಸೂರ್ಯಪರವಾದ ವೇದಮಂತ್ರಗಳು ಬೇಕಾದಷ್ಟಿವೆ. ಇವು ನಮಸ್ಕಾರಕಾಲಕ್ಕೂ ಉಪಯೋಗಿಸಲ್ಪಡುತ್ತವೆ. ಮುಖ್ಯವಾಗಿ ಎರಡು ಧ್ಯಾನಶ್ಲೋಕಗಳನ್ನು ಮಾತ್ರ ವಾಚಕರ ಅವಗಾಹನೆಗೆ ತರಲು ಇಚ್ಛಿಸುತ್ತೇನೆ:–

**ನಮಃ ಸವಿತ್ರೇ ಜಗದೇಕಚಕ್ಷುಷೇ**
**ಜಗತ್ಪ್ರಸೂತಿಸ್ಥಿತಿನಾಶಹೇತವೇ ।**
**ತ್ರಯೀಮಯಾಯ ತ್ರಿಗುಣಾತ್ಮಧಾರಿಣೇ**
**ವಿರಿಂಚಿನಾರಾಯಣಶಂಕರಾತ್ಮನೇ ॥**

**ಉದಯೇ ಬ್ರಹ್ಮರೂಪೋಽಸೌ । ಮಧ್ಯಾಹ್ನೇ ತು ಮಹೇಶ್ವರಃ ।**
**ಅಸ್ತಮಾನೇ ಸ್ವಯಂ ವಿಷ್ಣುಃ । ತ್ರಯೀಮೂರ್ತಿರ್ದಿವಾಕರಃ ॥**

ಈ ಪದ್ಯಗಳಲ್ಲಿ ಸೂರ್ಯನನ್ನು ಜಗತ್ತಿನ ಉತ್ಪತ್ತಿಸ್ಥಿತಿನಾಶಕಾರಣನೆಂದೂ ವೇದಾತ್ಮಕನೆಂದೂ ತ್ರಿಗುಣಗಳನ್ನು ಧರಿಸಿರುವವನೆಂದೂ ಬ್ರಹ್ಮವಿಷ್ಣುಮಹೇಶ್ವರ ರೆಂಬ ತ್ರಿಮೂರ್ತಿಗಳ ರೂಪನಾಗಿ ಕ್ರಮವಾಗಿ ಉದಯಾಸ್ತಮಧ್ಯಕಾಲಗಳಲ್ಲಿ ಕಂಡುಬರುವವನೆಂದೂ ಹೊಗಳಿದೆ. ಹೀಗೆ ಸೂರ್ಯಭಗವಂತನನ್ನು ಧ್ಯಾನಿಸುತ್ತಾ ಮುಂದಿನ ಪೂಜಾಕ್ರಮಗಳನ್ನು ಕೈಗೊಳ್ಳಬೇಕು. ಪೂಜೆಯೆಲ್ಲವೂ ಪೂರೈಸಿದ ಅನಂತರ ನಮಸ್ಕಾರಗಳನ್ನು ಅರ್ಪಿಸಿ ಅರ್ಘ್ಯಪ್ರದಾನಮಾಡಿ ಪೂಜೆಯನ್ನು ಪೂರೈಸಬೇಕು. ಭಾನುವು ನಮಸ್ಕಾರಪ್ರಿಯನೆಂದು ಪುರಾಣಗಳಲ್ಲಿ ತಿಳಿಸಿರುವದ ರಿಂದ ಈ ವ್ರತದಲ್ಲಿ ನಮಸ್ಕಾರಗಳೇ ಪ್ರಧಾನವಾದ ಅಂಗವಾಗಿರುತ್ತವೆ. ಆದ್ದರಿಂದ ಅದರ ಕೆಲವು ವಿವರಗಳನ್ನು ಈಗ ವಿಚಾರಮಾಡಿ ತಿಳಿಯೋಣ.

ನಮಸ್ಕಾರೋಪಚಾರವು ಸಕಲದೇವತೆಗಳಿಗೂ ಗುರುಹಿರಿಯರಿಗೂ ಅತ್ಯಂತ ಪ್ರಿಯವಾದುದೆಂಬುದರಲ್ಲಿ ಸಂಶಯವಿಲ್ಲ. ಇದು ಕಾಸುಖರ್ಚಿಲ್ಲದ ಸಾಧನವೂ ಹೌದು. ಆದರೆ ಇದಕ್ಕೆ ಶರೀರದಾರ್ಢ್ಯವೂ ನಮ್ರಮನಸ್ಸೂ ಪೂಜ್ಯಭಾವನೆಯೂ ಬೇಕು. ಈಗಿನ ಕಾಲದಲ್ಲಿ ಬೀದಿಯಲ್ಲಿ ಹೋಗುತ್ತಿರುವವರಿಗೂ ವಾಹನಗಳಲ್ಲಿ ಎದುರಾಗುವವರಿಗೂ ನಮಸ್ಕಾರಗಳನ್ನು ಹೇಳುವದುಂಟು. ಇವೆಲ್ಲ ಕೃತ್ರಿಮವೆಂದು ಬೇರೆ ಹೇಳಬೇಕಾಗಿಲ್ಲ. ದೇವರ ವಿಷಯಕ್ಕೆ ಹಾಗೆ ಬಾಯಿಮಾತಿನಲ್ಲಿ ಹೇಳಿದರೆ ಆಗುವಂತಿಲ್ಲ. ಸಾಷ್ಟಾಂಗನಮಸ್ಕಾರವೇ–ಪ್ರದಕ್ಷಿಣಾಪೂರ್ವಕವಾಗಿಯೇ ಆಗ ಬೇಕು. ಆದ್ದರಿಂದ ಮೊದಲು ಪ್ರದಕ್ಷಿಣೆಯನ್ನು ಜಿಜ್ಞಾಸೆಮಾಡೋಣ. ಈ ವಿಷಯದಲ್ಲಿ ಸುಪ್ರಸಿದ್ಧವಾಗಿರುವ ಈ ಪದ್ಯವನ್ನು ನೀವು ಕೇಳಿರಬೇಕು : 'ಯಾನಿ ಕಾನಿ ಚ ಪಾಪಾನಿ ಜನ್ಮಾಂತರಕೃತಾನಿ ಚ । ತಾನಿ ತಾನಿ ವಿನಶ್ಯಂತಿ ಪ್ರದಕ್ಷಿಣ ಪದೇ ಪದೇ' (ನಾವು ಬಲಭಾಗಕ್ಕೆ ತಿರುಗುತ್ತಾ ಹೆಜ್ಜೆಯನ್ನಿಟ್ಟಂತೆಲ್ಲ ಒಂದೊಂದು ಹೆಜ್ಜೆಗೂ ಜನ್ಮಜನ್ಮಾಂತರಗಳಲ್ಲಿ ಮಾಡಿರುವ ಪಾಪಗಳೆಲ್ಲವೂ ನಾಶವಾಗುವವು) ಎಂಬ ಅರ್ಥದ ಈ ಶ್ಲೋಕಕ್ಕೆ ಮೂಲವು ತಿಳಿಯದು. ಆದರೆ ಎಲ್ಲ ಭಕ್ತರ ಬಾಯಲ್ಲಿಯೂ ಇದು ನಲಿದಾಡುತ್ತಿದೆ. ಇರಲಿ. ಹೀಗೆ ಪ್ರದಕ್ಷಿಣೆಗೆ ಪಾಪಪರಿ ಹಾರವೇ ಫಲವು. ಅನಂತರ ನಮಸ್ಕಾರವು. ಕೋಲಿನಂತೆ ಶರೀರವನ್ನು ನೆಲಕ್ಕೊತ್ತಿ ಮಲಗುವದು. ಗೀತೆಯಲ್ಲಿ ಇದನ್ನು ಪ್ರಣಿಪಾತವೆಂದೇ ಕರೆದಿರುತ್ತದೆ. ಎದೆ, ತಲೆ, ಕಣ್ಣು, ಮಾತು, ಮನಸ್ಸು, ಕಾಲುಗಳು, ಕೈಗಳು, ಕಿವಿಗಳು– ಎಲ್ಲವೂ ಸಕ್ರಿಯ

ವಾಗಿದ್ದು ಒಂದುಗೂಡಿ ನಮ್ರವಾದರೆ ಸಾಷ್ಟಾಂಗನಮಸ್ಕಾರವಾಗುತ್ತದೆ. ಆಂಗ್ಲ ಉಡುಪಿನಲ್ಲಿರುವವರಿಗೆ ಹೀಗೆ ನಮಸ್ಕಾರಮಾಡಲು ಕಷ್ಟವಾಗಲಿದೆ. ಆದ್ದರಿಂದ ಭಾರತೀಯ ಉಡುಪುಗಳೇ ನಮಸ್ಕಾರಕ್ಕೆ ಯೋಗ್ಯವಾದವುಗಳು. ಅಂತೂ ಹೀಗೆ ಪ್ರದಕ್ಷಿಣನಮಸ್ಕಾರಗಳಿಂದ ಸೂರ್ಯನನ್ನು ಆರಾಧಿಸಬೇಕು-ಎಂದಭಿಪ್ರಾಯ.

ಈಗ ನಮಸ್ಕಾರಕಾಲಕ್ಕೆ ಹೇಳಬೇಕಾದ ಕೆಲವು ಮಂತ್ರಗಳು, ಬೀಜಾಕ್ಷರ ಗಳು, ಪೌರಾಣಿಕಶ್ಲೋಕಗಳ ಸ್ಥೂಲವಾದ ಪರಿಚಯವನ್ನು ಮಾಡಿಕೊಳ್ಳೋಣ. ಸೂರ್ಯನಮಸ್ಕಾರಾರಂಭದ ಕ್ರಮದಲ್ಲಿ ಮೊದಲು ಗಣಪತಿಗೂ ಅರುಣನಿಗೂ ನಮಸ್ಕಾರಗಳನ್ನು ಅರ್ಪಿಸಿ ಅನಂತರ ಸೂರ್ಯನಿಗೆ ನಮಸ್ಕಾರಗಳನ್ನು ಆರಂಭಿಸ ಬೇಕು. ಈ ಸಂದರ್ಭದಲ್ಲಿ ಹೇಳಬೇಕಾದ ವೇದಮಂತ್ರಗಳ ವಿವರವು ಹೀಗಿದೆ :- ೧) ಮಹಾಸೌರ- ಎಂದು ಪ್ರಸಿದ್ಧವಾದ ಋಗ್ವೇದದ ಮಂತ್ರಗಳು ೨) ಅರುಣ ಪ್ರಶ್ನ- ಎಂದು ಪ್ರಸಿದ್ಧವಾದ ಯಜುರ್ವೇದದ ಮಂತ್ರಗಳು ೩) ಇನ್ನು ಕೆಲವು ಸೂರ್ಯಪರವಾದ ಸೂಕ್ತಗಳು, ಯಜುಸ್ಸುಗಳು ಸಹ ಆಗಬಹುದು. ಅನಂತರ ೪) ರುದ್ರಾಧ್ಯಾಯ ೫) ಅಂಭಸಿ- ಎಂದು ಪ್ರಾರಂಭವಾಗುವ ಉಪನಿಷದನು ವಾಕ-ಇವುಗಳು. ಮುಂದುವರೆದು ೬) ಪೌರಾಣಿಕವಾದ ಶ್ಲೋಕಗಳು, ಸ್ತೋತ್ರ ಗಳು- (ಎಂದರೆ ಆದಿತ್ಯಹೃದಯಾದಿಸ್ತುತಿಗಳು) ೭) ಬೀಜಾಕ್ಷರಗಳಿಂದ ಕೂಡಿದ ದ್ವಾದಶನಾಮಗಳು- ಇಷ್ಟೂ ಆಗಬಹುದು. ಎಲ್ಲವೂ ಆಗದಿದ್ದರೆ ಕಾಲಕ್ಕೆ ಹಾಗೂ ಶರೀರಸ್ಥಿತಿಗೆ ತಕ್ಕಂತೆ ಕೆಲವನ್ನು ಮಾತ್ರ ಅಳವಡಿಸಿಕೊಳ್ಳಬಹುದು. ನಮಸ್ಕಾರ ಗಳ ಸಂಖ್ಯೆ ೧೦೮ ಆದರೂ ಆಗಬೇಕು. ಹೆಚ್ಚಾದರೂ ಬಾಧಕವಿಲ್ಲ. ವ್ರತಮಾಡಿದ ವರ ಜೊತೆಗೆ ಉಳಿದವರೂ ಕೂಡಿಕೊಂಡು ನಮಸ್ಕಾರಗಳನ್ನು ಹಾಕಬಹುದು. ಈ ರೀತಿಯಾಗಿ ಈ ವ್ರತವು ಸ್ವಲ್ಪಕಷ್ಟಸಾಧ್ಯವೂ ಸಾಕಷ್ಟು ತಿಳಿವಳಿಕೆ, ಮಂತ್ರ-ತಂತ್ರ -ಪ್ರಯೋಗಗಳನ್ನು ಆಶ್ರಯಿಸಿಯೂ ಇದೆ. ಈಚೆಗೆ ಇಂಥ ಅನುಷ್ಠಾನವನ್ನು ಕೈಗೊಳ್ಳುವವರು ವಿರಳರಾಗುತ್ತಿದ್ದಾರೆ. ಸೂರ್ಯೋದಯವಾಗುವ ವೇಳೆಗೆ ನಮ ಸ್ಕಾರಗಳು ಪ್ರಾರಂಭವಾಗುವಂತೆ ಕಾಲವನ್ನು ಹೊಂದಿಸಿಕೊಂಡು ಪೂಜಾದಿಗಳನ್ನು ಮುಂಚಿತವಾಗಿಯೇ ಮಾಡಿರಬೇಕು. ಮಂತ್ರಗಳ ಅರ್ಥವನ್ನು ಬಲ್ಲವರಾಗಿ ಅನು ಷ್ಠಾನಮಾಡಿದರೆ ಇನ್ನೂ ಚೆನ್ನಾಗಿರುತ್ತದೆ.

ವಾಚಕರೆ, ಈ ವ್ರತದ ಅನುಷ್ಠಾನವು ಅಸಾಧ್ಯವೆಂದು ಹೆದರಿ ಕೈಬಿಡಬೇಡಿರಿ. ಏನೊಂದೂ ಪೂಜಾದಿ ಕಟ್ಟಲೆಗಳು ನಿಮಗೆ ಆಗದೆ ಹೋದಾಗಲೂ ದ್ವಾದಶನಾಮ ಗಳಿಂದ ಸೂರ್ಯೋದಯಕಾಲಕ್ಕೆ ಸೂರ್ಯನಿಗೆ ನಮಸ್ಕಾರಗಳನ್ನು ಮಾಡುವದ ನ್ನಾದರೂ ಕಲಿಯಿರಿ. ಅದೇ ಎಷ್ಟೋ ಸತ್ಫಲಗಳನ್ನು ಉಂಟುಮಾಡಲಿದೆ. ಈ ವ್ರತಸಂಬಂಧವಾದ ಕಥಾಭಾಗವನ್ನು ಮುಂದೆ ತಿಳಿಸುವೆನು.

---

# ಜಿಜ್ಞಾಸುಗಳ ಪ್ರಶ್ನೆಗಳಿಗೆ ಉತ್ತರಗಳು

**ಪ್ರಶ್ನೆ :** ಪ್ರಪಂಚವು ಎದುರಿಗೆ ಕಾಣುತ್ತಿರುವಾಗ ಅದು ಮಿಥ್ಯೆಯೆನ್ನಬಹುದೆ? ಅದು ಇರುವದಾದರೆ ಆತ್ಮನು ಅದ್ವಿತೀಯನು, ಎಂದರೆ ತನಗೆರಡನೆಯದಿಲ್ಲದವನು- ಎಂಬುದು ಹೇಗೆ ಸರಿ ?

**ಉತ್ತರ :** ಆತ್ಮನ ಜೊತೆಗೆ ಒಂದು ಪ್ರಪಂಚವಿದೆ-ಎಂದು ಭಾವಿಸುವದೇ ತಪ್ಪು. ಏಕೆಂದರೆ ಆತ್ಮನಿಗಿಂತ ಬೇರೆಯಾಗಿ ಸ್ವತಂತ್ರವಾಗಿ ಒಂದು ಪ್ರಪಂಚವಿರುವದಿಲ್ಲ. ಆತ್ಮನೊಬ್ಬನು, ಪ್ರಪಂಚವೊಂದು- ಹೀಗೆ ಎರಡು ವಸ್ತುಗಳೆಂದು ಎಣಿಸುವದಕ್ಕೆ ಇಲ್ಲ; ಏಕೆಂದರೆ ಪ್ರಪಂಚ, ಆತ್ಮ-ಇವುಗಳು ಯಾವದಾದರೂ ಒಂದೇ ಜಾತಿಗೆ ಸೇರಿದ ಎರಡು ವ್ಯಕ್ತಿಗಳಲ್ಲ. ಒಂದೇ ಜಾತಿಗೆ ಸೇರಿದ ಹೊರತು 'ಎರಡು' ಎಂಬ ಪದವನ್ನುಪಯೋಗಿಸುವದಕ್ಕಿಲ್ಲ. ಉದಾಹರಣೆಗೆ: ಒಂದು ಕುರ್ಚಿಯ ಜೊತೆಗೆ ಇನ್ನೊಂದು ಕುರ್ಚಿಯನ್ನು ಸೇರಿಸಿದರೆ ಎರಡು ಕುರ್ಚಿಗಳಾಗುವವು. ಒಂದು ಕುರ್ಚಿಯ ಜೊತೆಗೆ ಒಂದು ಬೆಂಚನ್ನು ಸೇರಿಸಿದರೆ ಎರಡು ಮರದ ಸಾಮಾನುಗಳಾಗುವವು. ಆದರೆ ಆತ್ಮನ ಜೊತೆಗೆ ಒಂದು ಪ್ರಪಂಚವು ಸೇರಿದರೆ ಎರಡು ಏನಾಗುವದು ? ಒಬ್ಬ ವ್ಯಕ್ತಿಯ ಜೊತೆಗೆ ಒಂದು ನೆರಳು ಸೇರಿದರೆ ಎರಡು ಏನಾಗುವದು ? ಈ ಪ್ರಶ್ನೆಗೆ ಉತ್ತರವಿಲ್ಲ.

**ಪ್ರಶ್ನೆ :** ಏಕಿಲ್ಲ ? ಆತ್ಮನು, ಪ್ರಪಂಚವೂ ಸೇರಿ ಎರಡು ಪದಾರ್ಥಗಳೆಂದು ಹೇಳಬಹುದಲ್ಲವೆ ?

**ಉತ್ತರ :** ಕೂಡದು. ಏಕೆಂದರೆ ಆತ್ಮನು ಪದಾರ್ಥವಲ್ಲ. ಪದಾರ್ಥವೆಂದರೆ ಪದಕ್ಕೆ ಅರ್ಥವಾದದ್ದು. ಯಾವದನ್ನು ಮನಸ್ಸಿನಿಂದ ಗ್ರಹಿಸಬಹುದೋ ಅದನ್ನು ಪದದಿಂದ ಗುರುತಿಸಬಹುದು. ಅದು ಆ ಪದಕ್ಕೆ ಅರ್ಥವೆನಿಸುತ್ತದೆ. ಆದರೆ ಆತ್ಮನನ್ನು ಮನಸ್ಸಿನಿಂದ ಗ್ರಹಿಸುವದಕ್ಕೆ ಬರುವದಿಲ್ಲ. ಆತ್ಮನೇ ಮನಸ್ಸನ್ನೂ ಬೆಳಗುತ್ತಾನೆ. ಆದ್ದರಿಂದ ಆತ್ಮನು ಪದಾರ್ಥವಲ್ಲ. ಹೀಗಿರುವದರಿಂದಲೇ ಆತ್ಮನು ಶಿವನು, ಶಾಂತನು-ಎಂದು ಮುಂತಾಗಿ ವೇದಾಂತಿಗಳು ಉಪಯೋಗಿಸುತ್ತಿರುವ ಪದಗಳಿಂದ ಮಿಕ್ಕವರಿಗೆ ಯಾವ ಅರ್ಥವೂ ತೋರುವದಿಲ್ಲ. ಆದರೆ ಪದದ ಅರ್ಥವಲ್ಲದ ಮಾತ್ರಕ್ಕೆ ಆತ್ಮನೇ ಇಲ್ಲವೆಂದು ಹೇಳುವದಕ್ಕಿಲ್ಲ. ಏಕೆಂದರೆ ಅನುಭವದಲ್ಲಿ ಆತ್ಮನು ತೋರಿಕೊಳ್ಳುತ್ತಾನೆ. ಮತ್ತು ಆತ್ಮನ ಅನುಭವದ ಆಧಾರದಿಂದಲೇ ಮನಸ್ಸನ್ನೂ ಮನಸ್ಸಿಗೆ ಗೋಚರವಾಗುವ ಮಿಕ್ಕ ಪ್ರಪಂಚವನ್ನೂ ನಾವು ಗೊತ್ತುಪಡಿಸುತ್ತಿದ್ದೇವೆ.

**ಪ್ರಶ್ನೆ :** ಆತ್ಮನು ಪದಾರ್ಥವಲ್ಲದೆ ಇದ್ದರೆ ಹೋಗಲಿ; ಆತ್ಮನು, ಪ್ರಪಂಚ -ಎಂಬ ಅನುಭವದಿಂದಲೇ ಎರಡು ಇವೆಯೆಂದಾಗುವದಿಲ್ಲವೆ ?

**ಉತ್ತರ :** ಆಗುವದಿಲ್ಲ. ಏಕೆಂದರೆ ಒಂದು, ಎರಡು-ಎಂದು ಲೆಕ್ಕಹಾಕಬೇಕಾದರೆ ಒಂದೇ ದೇಶದಲ್ಲಿರುವ, ಅಥವಾ ಒಂದೇ ಕಾಲದಲ್ಲಿರುವ ಪದಾರ್ಥಗಳಾಗ

ಬೇಕು. ಕಾಲದಲ್ಲಿಲ್ಲದೆ, ದೇಶದಲ್ಲಿಲ್ಲದೆ, ಪದಾರ್ಥಗಳೂ ಅಲ್ಲದೆ ಇರುವಾಗ ಆತ್ಮ ಪ್ರಪಂಚಗಳಿಗೆ ಎರಡು ಎಂಬ ಸಂಖ್ಯೆಯು ಹೇಗೆ ಹೊಂದೀತು ?

**ಪ್ರಶ್ನೆ :** ಎರಡಿಲ್ಲದಿದ್ದರೆ ಎರಡು ಬೇರೆಬೇರೆಯ ಮಾತುಗಳ ಪ್ರಯೋಗವಾಗಿರುವದು ಹೇಗೆ ? ಆತ್ಮನೂ ಪ್ರಪಂಚವೂ ಎರಡೂ ಒಂದೇ–ಎಂದು ಹೇಳುವದಕ್ಕಾದೀತೆ ?

**ಉತ್ತರ :** ಒಂದೇ ತತ್ತ್ವವನ್ನು ಎರಡು ಬಗೆಯಿಂದ ನೋಡಬಹುದಾಗಿರುವದರಿಂದ ಎರಡು-ಮಾತುಗಳನ್ನು ನಾವು ಬಳಸುತ್ತಿದ್ದೇವೆ. ಜ್ಞಾನಿಗಳ ದೃಷ್ಟಿಯಿಂದ ಆತ್ಮನಾಗಿರುವದು, ಅಜ್ಞಾನಿಗಳ ದೃಷ್ಟಿಯಿಂದ ಪ್ರಪಂಚವಾಗಿರುವದು. ಅಜ್ಞಾನಿಗಳು ಪ್ರಪಂಚವೆಂದು ಕರೆಯುತ್ತಿರುವದು ನಿಜವಾಗಿ ಆತ್ಮನೇ ಆಗಿರುತ್ತದೆ.

**ಪ್ರಶ್ನೆ :** ಒಬ್ಬ ಆತ್ಮನೇ ಎರಡು ಬಗೆಯಿಂದ ತೋರುವದಾದರೆ ಎರಡೂ ಸತ್ಯವೆಂದೇ ಏತಕ್ಕೆ ಹೇಳಬಾರದು ?

**ಉತ್ತರ :** ಎರಡು ಎಂಬ ಸಂಖ್ಯೆಯು ಆತ್ಮ–ಪ್ರಪಂಚಗಳಿಗೆ ಹೊಂದುವದಿಲ್ಲ–ಎಂದು ಈಗಾಗಲೆ ಹೇಳಿದ್ದಾಗಿದೆ. ಪ್ರಪಂಚವು ಪರಮಾರ್ಥವಾಗಿರುವದಿಲ್ಲ. ಅದು ಅಸತ್ಯವಾಗಿ ಅಜ್ಞರು ಆತ್ಮನಲ್ಲಿ ಹುಟ್ಟುಗಟ್ಟಿಕೊಂಡದ್ದಾಗಿರುತ್ತದೆ.

**ಪ್ರಶ್ನೆ :** ಪ್ರಪಂಚವು ಅಸತ್ಯವಾದರೆ ಅದು ಆತ್ಮನನ್ನು ತಿಳಿದವರಿಗೆ ಕೂಡ ತೋರುವದೇಕೆ ? ಎಚ್ಚರವಾಗುತ್ತಲೂ ಕನಸಿನ ಪ್ರಪಂಚವು ಮಾಯವಾಗುವಂತೆ ಜ್ಞಾನವುಂಟಾಗುತ್ತಲೂ ಅದೇಕೆ ಮಾಯವಾಗುವದಿಲ್ಲ ?

**ಉತ್ತರ :** ಸರಿಯಾಗಿ ನೋಡಿದರೆ ಮಾಯವಾಗಿಯೇ ಆಗುತ್ತದೆ. ಅಥವಾ ಜ್ಞಾನವಾದಮೇಲೆ ಮಾಯವಾಗುವದೆಂದು ಹೇಳುವದಕ್ಕಿಂತ ಅದು ಯಾವಾಗಲೂ ಇರಲಿಲ್ಲವೆಂದು ಹೇಳುವದೇ ಸರಿಯಾದದ್ದು. ಆದ್ದರಿಂದ ಹೋಗಬೇಕಾದ ಪ್ರಪಂಚವೇ ಇಲ್ಲ.

**ಪ್ರಶ್ನೆ :** ಹಾಗಿದ್ದರೆ ಪ್ರಪಂಚವು ತೋರುವದೇತಕ್ಕೆ ?

**ಉತ್ತರ :** ಅದು ತೋರುವದೇತಕ್ಕೆಂಬ ಕಾರಣವನ್ನು ಕೊಡಬೇಕಾಗಿಲ್ಲ ; ಅದು ಸತ್ಯವಲ್ಲ, ಬರಿಯ ತೋರಿಕೆ–ಎಂಬಿದನ್ನು ಅರಿತುಕೊಂಡರೆ ಸಾಕು.

**ಪ್ರಶ್ನೆ :** ತೋರಿಕೆಯೇ ಆಗಲಿ ; ನಿಜವನ್ನು ಅರಿತಮೇಲೆ ಏಕೆ ಹೋಗಬಾರದು ?

**ಉತ್ತರ :** ತೋರಿಕೆಗಳೆಲ್ಲ ನಿಜವನ್ನು ಅರಿತರೆ ತೋರದಂತಾಗಬೇಕೆಂದು ನಿಯಮವೇನೂ ಇಲ್ಲ. ಇದು ನಿಜವಾಗಿ ಇಂಥ ವಸ್ತುವಲ್ಲ ; ವಸ್ತುವಿನಂತೆ ತೋರಿತು– ಎಂಬ ಅರಿವಾದ ಮೇಲೆ ನಾವು ಭ್ರಾಂತಿಯಿಂದ ಅದಕ್ಕೆ ಕೊಟ್ಟಿದ್ದ ಸತ್ಯತ್ವವು ಮಾತ್ರ ಹಾರಿಹೋಗುವದು. ತೋರಿಕೆಗಳಿಗೆಲ್ಲ ಈ ನಿಯಮವಿದೆ. ಆದ್ದರಿಂದ ಆತ್ಮನು ಅದ್ವಿತೀಯನೆಂದೇ ಸಿದ್ಧವಾಯಿತು.

---

# ದೀಪಾವಳಿ-ಗೀತಾಜಯಂತಿ

( ಗೀತಾಪ್ರಿಯ )

ಪ್ರತಿವರ್ಷವೂ ಕಾರ್ತಿಕಮಾಸದಲ್ಲಿ ದೀಪಾವಳಿಯು ಬರುತ್ತದೆ. ಮಾರ್ಗಶೀರ್ಷಮಾಸದಲ್ಲಿ ಗೀತಾಜಯಂತಿಯು ಬರುತ್ತದೆ. ದೀಪಾವಳಿಯನ್ನು ಬಹುಮಟ್ಟಿಗೆ ಎಲ್ಲರೂ ಅನುಷ್ಠಿಸುತ್ತಾರೆ. ಆಗ್ಗೆ ಅಭ್ಯಂಗನಸ್ನಾನ, ಹೊಸಬಟ್ಟೆಗಳನ್ನು ಉಡುವದು, ಪಟಾಕಿಗಳನ್ನು ಸುಡುವದು, ಬಂಧು- ಮಿತ್ರರೊಡನೆ ಕಲೆತು ಮೃಷ್ಟಾನ್ನಭೋಜನಮಾಡುವದು- ಮುಂತಾದವುಗಳನ್ನು ಜನರು ಆಚರಿಸುತ್ತಾರೆ. ಪತ್ರಿಕಾಪ್ರಪಂಚದವರು 'ವಿಶೇಷಾಂಕ'ಗಳನ್ನು ಹೊರಡಿಸಿ ಜನರನ್ನು ಆಕರ್ಷಿಸುತ್ತಾರೆ. ವಿದ್ಯುಚ್ಛಕ್ತಿಯ ವಿವಿಧವಾದ ದೀಪಗಳನ್ನು ಬೆಳಗಿಸಿ ಕೆಲವರು ತಮ್ಮ ಗೃಹಗಳನ್ನೂ ದೇವಾಲಯ- ಸಭಾಮಂದಿರಗಳನ್ನೂ ಅಲಂಕರಿಸುತ್ತಾರೆ. ಆದರೆ ಅನಂತರ ಪ್ರಾಪ್ತವಾಗುವ 'ಗೀತಾಜಯಂತಿ'ಯನ್ನು ಮಾತ್ರ ಎಲ್ಲಿಯೋ ಕೆಲವರು ನಡೆಯಿಸುತ್ತಾರೆ. ಬಹುಜನರಿಗೆ ಗೀತಾಜಯಂತಿ ಎಂಬ ಹಬ್ಬವೊಂದಿದೆ ಎಂಬುದೇ ತಿಳಿದಿಲ್ಲ. ಪತ್ರಿಕೆಗಳವರು ಎಲ್ಲಾ ವಿಧವಾದ ಜಾಹಿರಾತುಗಳು, ಕಥೆಗಳು, ನಾಟಕ, ವಿಡಂಬನೆ, ರಾಜಕೀಯ, ವರ್ಷಭವಿಷ್ಯ, ಸಿನೆಮ-ಕ್ರೀಡಾಸುದ್ದಿಗಳು-ಮುಂತಾದ ವಿಪುಲ ಸಾಹಿತ್ಯ (?) ವನ್ನು ಪ್ರಕಟಿಸಿ ಪ್ರಚಾರಮಾಡುತ್ತಾರಾದರೂ ಯಾವ ವಿಶೇಷಸಂಚಿಕೆಯಲ್ಲೂ- ಅದು ಎಷ್ಟೇ ಗಾತ್ರದ್ದಿರಲಿ- ಅರ್ಧಪುಟದಷ್ಟು ಕೂಡ ಗೀತೆಯ ವಿಚಾರಗಳಿರುವದಿಲ್ಲ. ಅಧ್ಯಾತ್ಮವಿದ್ಯಾಪೀಠಗಳಾದ ಮಠಗಳಲ್ಲಿ ಕೂಡ ವಿನಾಯಕಚತುರ್ಥಿ, ಶಂಕರಜಯಂತಿ, ಶರನ್ನವರಾತ್ರಿ, ಮಧ್ವನವಮಿ, ತಿರುನಕ್ಷತ್ರಗಳಲ್ಲಿ ಉತ್ಸವಗಳು ನಡೆಯುವಂತೆ ಗೀತಾಜಯಂತಿ ಉತ್ಸವವು ವೈಭವದಿಂದ ನಡೆಯುವ ಸುದ್ದಿಗಳು ಕೇಳಬರುತ್ತಿಲ್ಲ. ಬಹಳ ಊರುಗಳಲ್ಲಿ ಸಾರ್ವಜನಿಕವಾಗಿ ವೈಭವಯುತವಾಗಿ ಲಕ್ಷಾಂತರರೂಪಾಯಿಗಳ ವೆಚ್ಚದಿಂದ ಆಚರಿಸುವ ಗಣಪತಿಯ ಉತ್ಸವಗಳೊಡನೆ ಹೋಲಿಸಿದರೆ ಗೀತಾಜಯಂತಿಯೆಂಬುದು ಕೆರೆಯ ನೀರಿನಲ್ಲಿ ಒಂದು ಬಿಂದುವಿನಷ್ಟಾದೀತು.

ಕಾರ್ತಿಕಮಾಸದ ದೀಪಾವಳಿಯನ್ನು ಜನರು ಈಗ ಆಚರಿಸುವದಕ್ಕಿಂತಲೂ ಇನ್ನೊಂದು ವಿಲಕ್ಷಣರೀತಿಯಿಂದ ಆಚರಿಸಬೇಕಾದದ್ದು ಅವಶ್ಯವಾಗಿರುತ್ತದೆ. ಪ್ರಾಯಶಃ ಹಾಗೆ ಆಚರಿಸಿದ್ದರೆ ಗೀತಾಜಯಂತಿಯು ನೆನಪಾಗುತ್ತಿತ್ತೇನೊ ? ಎನಿಸುತ್ತದೆ. ಹೇಗೆಂದರೆ ನರಕಚತುರ್ದಶಿಯ ದಿನ ಅಜ್ಞಾನನರಕಾಸುರನ ಸಂಹಾರವಾದದ್ದರ ನೆನಪಾಗಿ ಭಕ್ತಿಯ ಎಣ್ಣೆಯನ್ನು ಸವರಿಕೊಂಡು ಅಭ್ಯಂಜನ ಮಾಡಿಕೊಂಡು ಕಾಮಕ್ರೋಧಗಳೆಂಬ ಪಟಾಕಿಗಳನ್ನು ಸುಟ್ಟು ಜ್ಞಾನದೀಪದ ಕುರುಹಾಗಿ ದೀಪಾವಳಿಯನ್ನು ಬೆಳಗಿ ಆಚರಿಸಬೇಕಾಗಿತ್ತು. ಆಗ್ಗೆ ಭಗವದ್ಗೀತೆಯ ನೆನಪು ಬರುತ್ತಿತ್ತು. ಈಗಲಾದರೂ ದೀಪಾವಳಿಯನ್ನು ಈ ಕ್ರಮದಲ್ಲಿ ಮತ್ತೊಮ್ಮೆ ಆಚರಿಸಿ ಬರಲಿರುವ ಗೀತಾಜಯಂತಿಯನ್ನು ಸ್ವಾಗತಿಸೋಣ.

ಭಗವದ್ಗೀತೆಯನ್ನು ಭಗವಂತನು ಅರ್ಜುನನ ಶೋಕಮೋಹಗಳನ್ನು ಕಳೆಯುವದಕ್ಕಾಗಿ ಉಪದೇಶಿಸಿದ್ದಾನೆಂದು ಶ್ರೀ ಶಂಕರಾಚಾರ್ಯರು ಅಭಿಪ್ರಾಯ ಪಟ್ಟಿರುತ್ತಾರೆ. ಇದಕ್ಕೆ ಗೀತೆಯಲ್ಲಿ ಆಧಾರವಿದೆಯೆ? ಎಂದು ವಿಚಾರಮಾಡುವಾಗ ಈ ಶ್ಲೋಕವು ನಮ್ಮ ಮುಂದೆ ನಿಲ್ಲುತ್ತದೆ.

**ನ ಹಿ ಪ್ರಪಶ್ಯಾಮಿ ಮಮಾಪನುದ್ಯಾತ್-**
**ಯಚ್ಛೋಕಮುಚ್ಛೋಷಣಮಿಂದ್ರಿಯಾಣಾಮ್ ।**
**ಅವಾಪ್ಯ ಭೂಮಾವಸಪತ್ನಮೃದ್ಧಂ**
**ರಾಜ್ಯಂ ಸುರಾಣಾಮಪಿ ಚಾಧಿಪತ್ಯಮ್ ॥**

"ಶತ್ರುಗಳಿಲ್ಲದ ಹಾಗೂ ಸಂಪತ್ಸಮೃದ್ಧವಾದ ರಾಜ್ಯವನ್ನಾಗಲಿ, ದೇವತೆಗಳ ಮೇಲಿನ ಒಡೆತನವನ್ನಾಗಲಿ ಪಡೆದುಕೊಂಡಮೇಲೂ ನನ್ನ ಇಂದ್ರಿಯಗಳನ್ನು ಸೊರಗಿಸುತ್ತಿರುವ **ಶೋಕವನ್ನು ಯಾವದು ಹೋಗಲಾಡಿಸೀತೋ** ಕಾಣೆನು" -ಎಂಬೀ ಅರ್ಜುನನ ವಾಕ್ಯದಲ್ಲಿ ಆತನನ್ನು ಬಹಳವಾಗಿ ಪೀಡಿಸುತ್ತಿರುವದೇ ಶೋಕವೆಂಬುದು ಸ್ಪಷ್ಟವಾಗಿದೆ. ಶೋಕಕ್ಕೆ ಮೂಲವು ಯಾವದೆಂದು ಹುಡುಕಿದಾಗ ಮೋಹವು- ಎಂದು ಗೊತ್ತಾಗುವದು. ಮೋಹಪರಿಹಾರಕ್ಕೆ ಜ್ಞಾನೋಪದೇಶವು ಪರಮೌಷಧವು- ಎಂಬಿದೂ ಪ್ರಸಿದ್ಧವು. ಆದ್ದರಿಂದ ಶ್ರೀ ಶಂಕರರ ಅಭಿಪ್ರಾಯವು ಮೂಲಾನುಸಾರಿ- ಎಂದು ಸಿದ್ಧವಾಗುತ್ತದೆ.

ಇಂಥ ಶೋಕಮೋಹಗಳ ಅಪನಯನಕ್ಕಾಗಿ ಜ್ಞಾನದೀಪವನ್ನು ಬೆಳಗುವದಾಗಿ ಭಗವಂತನು ಬಾಯಿಬಿಟ್ಟು ಹೇಳಿರುವ ಸಂದರ್ಭವನ್ನೂ ನೋಡೋಣ. ಗೀತೆಯ ೧೦ನೆಯ ಅಧ್ಯಾಯದ ೧೧ನೆಯ ಪದ್ಯದಲ್ಲಿ ಅದರ ಪ್ರಸ್ತಾಪವಿದೆ. ಆ ಶ್ಲೋಕವನ್ನು ಕೇಳಿರಿ:

**ತೇಷಾಮೇವಾನುಕಂಪಾರ್ಥಮಹಮಜ್ಞಾನಜಂ ತಮಃ ।**
**ನಾಶಯಾಮ್ಯಾತ್ಮಭಾವಸ್ಥೋ ಜ್ಞಾನದೀಪೇನ ಭಾಸ್ವತಾ ॥**

'ನಾನು ಅಜ್ಞಾನವೆಂಬ ಕತ್ತಲೆಯನ್ನು ಕಳೆಯಲು ಭಕ್ತರಮೇಲಿನ ಅನುಕಂಪೆಯಿಂದ ಅವರ ಅಂತಃಕರಣದಲ್ಲಿಯೇ ಇದ್ದುಕೊಂಡವನಾಗಿ ಪ್ರಕಾಶಮಾನವಾದ ಜ್ಞಾನದೀಪವನ್ನು ಬೆಳಗುವೆನು'-ಎಂದು ಭಗವಂತನು ಇಲ್ಲಿ ತಿಳಿಸಿರುತ್ತಾನೆ. ಶ್ರೀ ಶಂಕರಾಚಾರ್ಯರು ಜ್ಞಾನದೀಪವನ್ನು ಕುರಿತು ಹೀಗೆ ವ್ಯಾಖ್ಯಾನಮಾಡಿದ್ದಾರೆ. "ವಿರಕ್ತಿ ಎಂಬ ಹಣತೆಯಲ್ಲಿ ಭಕ್ತಿ ಎಂಬ ಎಣ್ಣೆಯನ್ನು ಹಾಕಿ, ಬ್ರಹ್ಮಚರ್ಯಾದಿ ಸಾಧನಗಳೆಂಬ ಬತ್ತಿಯನ್ನು ಅದರಲ್ಲಿ ನೆನೆಯಿಸಿಟ್ಟು ಭಗವದ್ಭಾವನೆ ಎಂಬ (ದೀಪವು ಉರಿಯಲು ಸಹಾಯಕವಾದ) ಗಾಳಿಯಿಂದ ಕೂಡಿದ, ವಿಷಯಗಳ ಚಿಂತನೆಯೆಂಬ ಬಿರುಗಾಳಿಯಿಲ್ಲದ ಅಂತಃಕರಣವೆಂಬ ಗೂಡಿನಲ್ಲಿರುವ ಜ್ಞಾನದೀಪವನ್ನು ಭಗವಂತನು ಬೆಳಗುತ್ತಾನೆ." ಈ ದೀಪಾವಳಿಯು ಯಾರ ಹೃದಯದಲ್ಲಿ ಬೆಳಗಲ್ಪಡುವದೋ, ಅಂಥವರು ಭಗವದ್ಗೀತಾಜಯಂತಿಯನ್ನು ಆಚರಿಸಿದಂತೆಯೇ -ಎಂದು ತಿಳಿಯಬೇಕು.

---

# ಕೂಡಿದ ಕನ್ನಡನಾಡು

(ಶ್ರೀಶ್ರೀಸಚ್ಚಿದಾನಂದೇಂದ್ರಸರಸ್ವತೀಸ್ವಾಮಿಗಳು)

ಹಳೆಯ ಮೈಸೂರುಪ್ರಾಂತ್ಯವು ಹಿಗ್ಗಿ ಕನ್ನಡಪ್ರಾಂತ್ಯಗಳೆಲ್ಲ ಒಂದಾಯಿತಲ್ಲವೆ? ಕನ್ನಡಿಗರೆಲ್ಲ ಒಂದೇ ಕನ್ನಡನುಡಿಯನ್ನು ಆಡುತ್ತಾ ನಲಿಯುತ್ತಿರುವೆವಲ್ಲವೆ? ಕನ್ನಡನಾಡನ್ನು 'ಕರ್ನಾಟಕ'ವೆಂದು ಕರೆದದ್ದೂ ಆಯಿತಲ್ಲವೆ? ಕನ್ನಡ ಭಾಷೆಗೆ ಅಗ್ರಸ್ಥಾನವನ್ನು ನೀಡಿ ಗೌರವಿಸಿಯೂ ಆಯಿತಲ್ಲವೆ? ಕನ್ನಡಿಗರೆ, ಈಗಲಾದರೂ ಕನ್ನಡನುಡಿಗೂ ಕನ್ನಡನಾಡಿಗೂ ಭೂಷಣವಾಗಿರುವಂತೆ ನಾವು ಹೇಗೆ ನಡೆದುಕೊಳ್ಳಬೇಕೆಂಬ ಯೋಚನೆಯನ್ನು ಮನಸ್ಸಿಗೆ ತಂದುಕೊಳ್ಳಬೇಕಲ್ಲವೆ?

ನಾವೆಲ್ಲರೂ ಕನ್ನಡಭಾಷೆಯಲ್ಲಿಯೇ ಮಾತನಾಡುವೆವು. ಓದಿಬರೆದುಮಾಡುವೆವು; ಒಬ್ಬರ ಅಭಿಪ್ರಾಯವು ಮತ್ತೊಬ್ಬರಿಗೆ ಯಾವ ಅಡ್ಡಿಯೂ ಇಲ್ಲದಂತೆ ತಿಳಿಯುವಂತಾಗುವದು. ಇದೊಂದು ವರವಲ್ಲವೆ? ಆದರೆ ಇದನ್ನು ನಾವು ಹೇಗೆ ಉಪಯೋಗಿಸಿಕೊಳ್ಳಬೇಕು? ನುಡಿ-ನಡೆಗಳಿಗೆ ಹಿಂತಡಿಕೆಯಾಗಿರುವದೇ ಮನಸ್ಸು. ಅದೇ ನುಡಿಗೆ ಉತ್ತೇಜಕವಾದ ಮೂಲವಾಗಿರುತ್ತದೆ. ಕನ್ನಡನುಡಿಯು ಸ್ವಚ್ಛವಾಗಿರಬೇಕಾದರೆ ಕನ್ನಡಿಯಂಥ ಸ್ವಚ್ಛವಾದ ಮನಸ್ಸು ನಮಗೆ ಬೇಕಲ್ಲವೆ?

ಮನಸ್ಸು ಕನ್ನಡಿಯಂತೆ ಹೊಳೆದಾಗ ಅದರಲ್ಲಿ ಪರಮಾರ್ಥತತ್ತ್ವವು ತಾನೇ ಪ್ರತಿಬಿಂಬಿಸುತ್ತದೆ. ಹೃದಯದಲ್ಲಿ ಮಾರುಹೊಳೆದ ಆನಂದವೇ ನುಡಿಯಲ್ಲಿಯೂ ನಡೆಯಲ್ಲಿಯೂ ಪ್ರೇಮರೂಪವಾಗಿ ಹೊರಬೀಳುತ್ತದೆ. ಆದ್ದರಿಂದ ಕನ್ನಡಿಗರು ಪರಸ್ಪರಪ್ರೇಮಕ್ಕೆ ಮಿಕ್ಕವರಿಗೂ ಮಾದರಿಯು ಕನ್ನಡಿಯಾಗಬೇಕಾದರೆ ಮೊದಲು ತಮ್ಮ ಅಂತಃಕರಣವನ್ನು ಕನ್ನಡಿಯಂತೆ ಸ್ವಚ್ಛವಾಗಿರಿಸಿಕೊಳ್ಳಬೇಕು. ಅದಕ್ಕೆ ಸಹಾಯವಾಗುವಂತೆ ಭುವನೇಶ್ವರಿಯಾದ ಕನ್ನಡಮಾತೆಯ ಗುಣವಿಶೇಷಗಳನ್ನೂ ಕನ್ನಡಿಗರಾಗಿ ಬಾಳಿ ಭಗವದ್ಭಕ್ತಿಯನ್ನು ಜನರಲ್ಲಿ ಬಿತ್ತಿದ ಮಹಾತ್ಮರುಗಳ ಬೋಧೆ-ಹಾಡು-ಸಾಹಿತ್ಯಗಳನ್ನೂ ಅನುಸಂಧಾನಮಾಡಬೇಕು. ರಾಜಕಾರಣ, ಕುಲ, ಗೋತ್ರ, ಜಾತಿ- ಮುಂತಾದ ಕ್ಷುದ್ರನಿಮಿತ್ತಗಳ ಕೆಸರನ್ನು ಮನಸ್ಸಿನ ಕನ್ನಡಿಯಮೇಲೆ ಹತ್ತಿಸಿಕೊಳ್ಳಬಾರದು. ಈವರೆಗೆ ಹಾಗೇನಾದರೂ ಹತ್ತಿಸಿಕೊಂಡಿದ್ದರೆ ಕೂಡಲೆ ಒರಸಿಹಾಕಿಬಿಡಬೇಕು. ಕನ್ನಡಿಗರೆಲ್ಲರೂ ತಮ್ಮತಮ್ಮ ತಿಳಿವಳಿಕೆಯನ್ನು ಪ್ರೇಮಪೂರಿತವಾದ ಕನ್ನಡನುಡಿಯಿಂದ ತಮ್ಮ ನೆರೆಪ್ರಾಂತದವರ ಹೃದಯದಲ್ಲಿಯೂ ಕುಳಿತಿರುವ ಭಗವಂತನ ಸ್ತೋತ್ರವಾಗಲೆಂಬ ಭಾವನೆಯಿಂದ ಸಮರ್ಪಣಮಾಡುವದಕ್ಕೆ ಹವಣಿಸಬೇಕು. ರಾಜ್ಯೋತ್ಸವಗಳಾಗಲಿ, ವಿಶ್ವಕನ್ನಡ ಮೇಳವಾಗಲಿ- ಯಾವದೇ ಸಮಾರಂಭಗಳೂ ಕನ್ನಡಿಯಂಥ ಸ್ವಚ್ಛಮನಸ್ಸಿನ ಆವಿರ್ಭಾವಕ್ಕೆ ಪ್ರೇರಕವಾಗುವಂತಿರಬೇಕು. ಇದೇ ಕನ್ನಡದೇಶ-ಭಾಷಾಭಕ್ತಿಯ ಪರಾಕಾಷ್ಠೆಯು.

---

# ಉಪಕಾರಸ್ಮರಣೆ

**ಪತ್ರಿಕೆಗೆ ನೂತನ ಮಹಾಪೋಷಕರುಗಳು :** ಶ್ರೀಯುತರುಗಳಾದ MPN. 753 ಜಿ. ಎಸ್. ಶಿವಪ್ಪನವರು, ಸಿಂಗಾಪುರ ( ಹೊಳೆನರಸೀಪುರ ತಾಲ್ಲೂಕು ); 754 ಡಿ. ಎಸ್. ಶ್ರೀಪಾದಸ್ವಾಮಿಯವರು, ಹಾಸನ; 755 ಶ್ರೀಮತಿ ಇಂದಿರಾ ರಾಜಶೇಖರ್‌ರವರು, ತುಮಕೂರು ಈ-ಮಹನೀಯರುಗಳು ರೂ. ೧೫೧ ರಂತೆ ಮಹಾಪೋಷಣದ್ರವ್ಯವನ್ನು ಅರ್ಪಿಸಿ ಪತ್ರಿಕೆಯನ್ನು ಪ್ರೋತ್ಸಾಹಿಸಿದ್ದಾರೆ.

**೩೫ನೆಯ ಸಂಪುಟಕ್ಕೆ ಪೋಷಕಮಹಾಶಯರುಗಳು :** ಶ್ರೀಗಳಾದ ಚಂದ ನಂಬರ್ 467 ಡಿ. ಎಸ್. ಸುಬ್ಬರಾಯರು, ತಿಪಟೂರು; 476 ಸಿ. ವಿ. ನಾರಣಪ್ಪನವರು, ತಿಪಟೂರು- ಈ ಮಹಾಶಯರುಗಳು ರೂ. ೨೦ ರಂತೆ ಪೋಷಣದ್ರವ್ಯವನ್ನು ನೀಡಿರುತ್ತಾರೆ.

1983 ನೆಯ ಅಕ್ಟೋಬರ್ ಮಾಹೆಯಲ್ಲಿ ಈ ಕೆಳಗೆ ಕಂಡಂತೆ ಸಹಾಯದ್ರವ್ಯವನ್ನು ಕೃತಜ್ಞತೆಯಿಂದ ಸ್ವೀಕರಿಸಲಾಗಿದೆ :-

**ಗ್ರಂಥಪ್ರಕಟನೆಗೆ :** ಶ್ರೀಗಳಾದ ನಾಮಾ ಎಸ್. ನಾರಾಯಣಶೆಟ್ಟರು, ತುಮಕೂರು ರೂ. ೫೦೧; ಶ್ರೀಮತಿ ಪಾರ್ವತಮ್ಮನವರು, ತುಮಕೂರು ರೂ. ೨೫೧; ಶ್ರೀ ಎಂ. ವಿ. ರಾಮಚಂದ್ರರವರು, ಬೆಂಗಳೂರು ರೂ. ೫೦೧; ಒಟ್ಟು ರೂ. ೧೨೫೩;

**ಪೂಜಾಮಂದಿರನಿಧಿಗೆ :** ಯಾದಾಳಂ ವಂಶೀಕರು, ಬೆಂಗಳೂರು ರೂ. ೧೫; ಟಿ. ಸೂರ್ಯನಾರಾಯಣರವರು, ಹೊಳೆನರಸೀಪುರ ರೂ. ೫; ಅಂತರಂಗಭಕ್ತರು, ತಿಪಟೂರು ರೂ. ೫೦; ಒಟ್ಟು ರೂ. ೭೦;

**ಗುರುಮಂದಿರನಿಧಿಗೆ :** ಅಂತರಂಗಭಕ್ತರು, ತಿಪಟೂರು ರೂ. ೫೦; ಯಾದಾಳಂ ವಂಶೀಕರು, ಬೆಂಗಳೂರು ರೂ. ೧೦; ಒಟ್ಟು ರೂ. ೬೦;

**ಸಂನ್ಯಾಸಿಗಳ ಸತ್ಕಾರಖಾತೆಗೆ :** ಗಣಪತಿ ಸೇವಾ ಸಮಿತಿ, ಹೊಳೆನರಸೀಪುರ ರೂ. ೧೨; ಆರ್. ಭೋಜರಾಜರವರು, ಬೆಂಗಳೂರು ರೂ ೧೫; ಚೆನ್ನಮ್ಮನವರು, ಹೊಳೆನರಸೀಪುರ ರೂ ೫; ಕೆ. ವಿ. ಲಲಿತಾಂಬರವರು, ಹೊಳಲ್ಕೆರೆ ರೂ. ೧೦; ಸಂಪತ್ಕುಮಾರಶೆಟ್ಟರು, ಹೊಳೆನರಸೀಪುರ ರೂ. ೨೦; ಅಂತರಂಗಭಕ್ತರು, ತಿಪಟೂರು ರೂ. ೧೦; ಒಟ್ಟು ರೂ. ೭೨;

**ಅನುಷ್ಠಾನನಿಧಿಗೆ :** ಶ್ರೀಗಳಾದ ಎ. ತಾಂಡವೇಶ್ವರರವರು, ಹೊಳೆನರಸೀಪುರ ರೂ.೧೦; ಪುಂಡಲೀಕರಾವ್‌ರವರು, ಬೆಂಗಳೂರು ರೂ. ೨೫; ಒಟ್ಟು ರೂ. ೩೫;

**ವಿಶೇಷ :** ವಿಶೇಷಸಂದರ್ಭಗಳಲ್ಲಿ ಉಪಯೋಗಕ್ಕಾಗಿ ಈಚೆಗೆ ೧೫೦ ಸ್ಟೀಲ್ ಲೋಟಗಳನ್ನೂ ಒಂಭತ್ತು ಬಡಿಸುವ ಬಕೆಟ್‌ಗಳನ್ನೂ ಕೊಳ್ಳಲಾಗಿದೆ. ಪದಾರ್ಥಗಳ ರೂಪದಲ್ಲಿ ಮಹಾಜನರು ಅರ್ಪಿಸಬಹುದಾದ ಸಹಾಯಗಳನ್ನೂ ಸ್ವೀಕರಿಸಲಾಗುವದು.

ಮೇಲ್ಕಂಡ ಮಹಾಶಯರುಗಳಿಗೆಲ್ಲ ನಮ್ಮ ಕೃತಜ್ಞತಾಪೂರ್ವಕವಾದ ಅಭಿನಂದನೆಗಳನ್ನು ಈ ಮೂಲಕ ಸಮರ್ಪಿಸುವೆವು.

---

# ಸಾರಸ್ವತ-ಮಹಾಯಜ್ಞ-ಅನುಷ್ಠಾನ

**ಪ್ರಿಯ ವಾಚಕರೆ,**

ಭರತಖಂಡದ ಅಮೂಲ್ಯ ಸಂಸ್ಕೃತಿಯ ಗನಿಗಳಾದ ವೇದಗಳಲ್ಲಿ ಕೊನೆಯ ಭಾಗಗಳಾದ ಉಪನಿಷತ್ತುಗಳನ್ನು 'ವೇದಾಂತ'ಗಳೆಂದು ಕರೆಯುತ್ತಾರೆ. ಹಾಲಿನಿಂದ ಕಡೆದು ತೆಗೆದ ಬೆಣ್ಣೆಯಂತೆ ಇವು ಈ ಜಗತ್ತಿನ ಪರಮಾರ್ಥದ ರಹಸ್ಯವನ್ನು ತಿಳಿಸುವ ಅಮೂಲ್ಯಜ್ಞಾನಭಂಡಾರಗಳಾಗಿವೆ. ಇಂಥ ಉಪನಿಷತ್ತುಗಳಲ್ಲಿ ಸುಪ್ರಸಿದ್ಧವಾದ ಬೃಹದಾರಣ್ಯಕೋಪನಿಷತ್ತಿಗೆ ಒಂದುಸಾವಿರ ವರ್ಷಗಳ ಹಿಂದೆಯೇ ಶ್ರೀಶಂಕರಾಚಾರ್ಯರು ಭಾಷ್ಯವನ್ನು ಬರೆದು ಅದರಲ್ಲಿ ಅಡಗಿರುವ ಅಧ್ಯಾತ್ಮವಿದ್ಯೆಯನ್ನು ಭರತಖಂಡದಲ್ಲೆಲ್ಲ ಹರಡಿ ಪ್ರಚಾರಮಾಡಿದರು.

ಕನ್ನಡಿಗರ ಸುದೈವದಿಂದ ಈ ಶತಮಾನದಲ್ಲಿ ಮತ್ತೊಬ್ಬ ಅಭಿನವ ಶಂಕರರು ಅವತರಿಸಿ ಆದಿಶಂಕರರು ಸಂಸ್ಕೃತಭಾಷೆಯಲ್ಲಿ ಬರೆದಿದ್ದ ಭಾಷ್ಯಗಳನ್ನೆಲ್ಲ ಕನ್ನಡಿಸಿ ಅವುಗಳನ್ನೆಲ್ಲ ತಮ್ಮ ಜೀವಿತಕಾಲದಲ್ಲಿಯೇ **ಹೊಳೆನರಸೀಪುರದ ಅಧ್ಯಾತ್ಮ ಪ್ರಕಾಶಕಾರ್ಯಾಲಯದ** ಮೂಲಕ ಪ್ರಕಟಿಸಿ ತಮ್ಮ ಅಧ್ಯಾತ್ಮಸಾರಸ್ವತ ಸೇವೆಯಿಂದ ಅನ್ವರ್ಥವಾಗಿ 'ಸರಸ್ವತಿ'ಗಳೆನಿಸಿ ಪರಿಶುದ್ಧವಾದ ಸಚ್ಚಿದಾನಂದ ತತ್ತ್ವದ ಪ್ರಚಾರದ ಮೂಲಕ 'ಶ್ರೀ ಸಚ್ಚಿದಾನಂದಸರಸ್ವತಿ'ಗಳೆಂಬ ಹೆಸರಿನಿಂದ ರಾರಾಜಿಸಿದರು.

ಇಂಥ ಮಹಾತ್ಮರು ಕೈಗೊಂಡಿರುವ ಸಾರಸ್ವತ ಮಹಾಯಜ್ಞಾನುಷ್ಠಾನವು ಈಗಲೂ ನಿರಂತರವಾಗಿ ಹೊಳೆನರಸೀಪುರದಲ್ಲಿ ಇದೇ ಮಹನೀಯರ ಮಹಾಸಮಾಧಿಯ ಸನ್ನಿಧಿಯಲ್ಲಿಯೇ ಗ್ರಂಥಪ್ರಕಟನೆ, ಮುದ್ರಣ, ಪ್ರಚಾರಗಳ ಮಾಧ್ಯಮದಿಂದ ನಡೆಯುತ್ತಲಿದೆ. 1983ನೆಯ ವರ್ಷದಲ್ಲಿ ಈ ಯಜ್ಞದ ಅಂಗವಾಗಿ ಮೂರುಸಾವಿರ ಪುಟಗಳಷ್ಟು ಅಧ್ಯಾತ್ಮಸಾಹಿತ್ಯವನ್ನು ಪ್ರಕಟಿಸಲಾಯಿತು.

ಈಗ ನಾವು ಪುನಃ **ಏಳುಸಾವಿರ ಪುಟಗಳಷ್ಟು** ಅಧ್ಯಾತ್ಮಸಾಹಿತ್ಯವನ್ನು ಪ್ರಕಟಿಸಲು ಸಂಕಲ್ಪಿಸಿ ಸದ್ಯಕ್ಕೆ **ಎರಡು ಸಾವಿರ ಪುಟಗಳ ಬೃಹದಾರಣ್ಯಕ-ಉಪನಿಷದ್ಭಾಷ್ಯದ** ಮುದ್ರಣಕಾರ್ಯವನ್ನು ತೆಗೆದುಕೊಂಡಿರುತ್ತೇವೆ.

ಈ ಮಹಾಯಜ್ಞಕ್ಕೆ **ಐದುನೂರು-ರೂಪಾಯಿಗಳಿಗೆ** ಕಡಿಮೆಯಿಲ್ಲದಂತೆ ಧನಸಹಾಯವನ್ನು ಮಾಡುವವರಿಗೆ ನೂತನಗ್ರಂಥದ ಒಂದು ಸೆಟ್‌ನ್ನು ಪ್ರಸಾದರೂಪವಾಗಿ ಸಮರ್ಪಿಸಲಾಗುವದು. ಉಳಿದ ದಾನಿಗಳಿಗೆ ಕೃತಜ್ಞತಾಪತ್ರಗಳನ್ನು ಬರೆದು ಅಧ್ಯಾತ್ಮಪ್ರಕಾಶಮಾಸಪತ್ರಿಕೆಯಲ್ಲಿ ಹೆಸರುಗಳನ್ನು ಪ್ರಕಟಿಸಲಾಗುವದು. ಮಹಾಜನರು ಕೃಪೆಮಾಡಿ ತಮ್ಮ ಧನಸಹಾಯವನ್ನು ಕೆಳಗಿನ ವಿಳಾಸಕ್ಕೆ ಕಳುಹಿಸಿಕೊಟ್ಟು ಪುಣ್ಯಭಾಗಿಗಳಾಗಬೇಕಾಗಿ ಪ್ರಾರ್ಥನೆ.

ಚೆಕ್ಕು ಮತ್ತು ಡ್ರಾಫ್ಟ್‌ಗಳಲ್ಲಿ **ಸಂಸ್ಥೆಯ ಹೆಸರನ್ನು ಮಾತ್ರವೇ ಬರೆಯಬೇಕು.** ಹಾಗೂ ಕ್ರಾಸ್ ಮಾಡಬೇಕು.

**ಅಧ್ಯಾತ್ಮಪ್ರಕಾಶಕಾರ್ಯಾಲಯ, ಹೊಳೆನರಸೀಪುರ-573211.**

೨೧-೨೩. ಅವನು ಅಲ್ಲಿ ನಿಷ್ಠುರವಾಗಿ ಮಾತನಾಡುತ್ತಿದ್ದ ಚಿಕ್ಕಪ್ಪ ನನ್ನು ಕಂಡು ಹೀಗೆಂದನು: "ಇಲ್ಲಿಯೇ ಹುಟ್ಟಿ ಬೆಳೆದ, ನನ್ನ ತಂದೆಯ ಒಡಹುಟ್ಟಿದ ತಮ್ಮನಾಗಿದ್ದು ಯಾವ ನೀನು ಸ್ವಜನರನ್ನು ಕೈಬಿಟ್ಟು ಬೇರೊಬ್ಬನಿಗೆ ದಾಸನಾಗಿರುವೆಯಲ್ಲವೆ? ನೀನು ಹೇಗೆ ತಾನೆ ಮಗನಿಗೆ ದ್ರೋಹ ಮಾಡಲು ಇಚ್ಛಿಸಿದೆ? ನೀನು ದುರ್ಬುದ್ಧಿಯುವನೂ ಪಾಪಿಯೂ ಆಗಿರುವೆ." ಹೀಗೆಂದು ಹೇಳುತ್ತಾ ಹನುಮಂತನ ಹಿಂಭಾಗದಲ್ಲಿದ್ದ ಲಕ್ಷ್ಮಣನನ್ನು ಕಂಡು ಸನ್ನದ್ಧವಾದ ಆಯುಧಗಳುಳ್ಳ ದೊಡ್ಡರಥವನ್ನೇರಿ ನಿಂತನು.

**ಮಹಾಪ್ರಮಾಣಮುದ್ಯಮ್ಯ ಘೋರಂ ವಿಸ್ಫಾರಯನ್ ಧನುಃ ।**
**ಅದ್ಯ ವೋ ಮಾಮಕಾ ಬಾಣಾಃ ಪ್ರಾಣಾನ್ ಪಾಸ್ಯಂತಿ ವಾನರಾಃ ॥೨೪॥**
**ತತಃ ಶರಂ ದಾಶರಥಿಃ ಸಂಧಾಯಾಮಿತ್ರಕರ್ಶನಃ ।**
**ಸಸರ್ಜ ರಾಕ್ಷಸೇಂದ್ರಾಯ ಕ್ರುದ್ಧಃ ಸರ್ಪ ಇವ ಶ್ವಸನ್ ॥೨೫॥**
**ಇಂದ್ರಜಿದ್ ರಕ್ತನಯನೋ ಲಕ್ಷ್ಮಣಂ ಸಮುದೈಕ್ಷತ ।**

೨೪-೨೫. ಬಹಳ ದೊಡ್ಡಪ್ರಮಾಣದ ಭಯಂಕರವಾದ ಬಿಲ್ಲನ್ನು ಟಂಕಾರಮಾಡುವವನಾಗಿ 'ಎಲೈ ಕಪಿಗಳಿರಾ, ಈಗ ನನ್ನ ಬಾಣಗಳು ನಿಮ್ಮ ಪ್ರಾಣಗಳನ್ನು ಕುಡಿಯಲಿರುವವು'– ಎಂದನು. ಅನಂತರ ಶತ್ರುನಾಶಕನಾದ ಲಕ್ಷ್ಮಣನು ಬಾಣವನ್ನು ಹೂಡಿ ಕೋಪಗೊಂಡ ಹಾವಿನಂತೆ ಬುಸುಗುಟ್ಟುತ್ತಾ ರಾಕ್ಷಸೇಂದ್ರನಾದ (ಇಂದ್ರಜಿತ್ತಿನ ಕಡೆಗೆ) ಬಾಣವನ್ನು ಎಸೆದನು. ಆಗ ಇಂದ್ರಜಿತನು ಕೆಂಪಾದ ಕಣ್ಣುಗಳಿಂದ ಲಕ್ಷ್ಮಣನನ್ನು ನೋಡಿದನು.

**ಶಕ್ರಾಶನಿಸಮಸ್ಪರ್ಶೈಃ ಲಕ್ಷ್ಮಣೇನಾಹತಃ ಶರೈಃ ।**
**ಮುಹೂರ್ತಮಭವತ್ ಮೂಢಃ ಪುನಃ ಪ್ರತ್ಯಾಹೃತೇಂದ್ರಿಯಃ ॥೨೬॥**
**ದದರ್ಶಾವಸ್ಥಿತಂ ವೀರಂ ವೀರೋ ದಶರಥಾತ್ಮಜಮ್ ।**
**ಸೋಽಭಿಚಕ್ರಾಮ ಸೌಮಿತ್ರಿಂ ಕ್ರೋಧಸಂರಕ್ತಲೋಚನಃ ॥೨೭॥**
**ಶರಾನ್ ಧನುಷಿ ಸಂಧಾಯ ಲಕ್ಷ್ಮಣಂ ಚೇದಮಬ್ರವೀತ್ ।**

೨೬-೨೭. ದೇವೇಂದ್ರನ ವಜ್ರಾಯುಧದ ಹೊಡೆತಕ್ಕೆ ಸಮಾನವಾದ ಲಕ್ಷ್ಮಣನ ಬಾಣಘಾತಗಳಿಂದ ಒಂದು ಮುಹೂರ್ತಕಾಲದವರೆಗೆ ಮೂಢನಾಗಿ ಬಿಟ್ಟನು. ಪುನಃ ಎಚ್ಚರಿಸಲ್ಪಟ್ಟ ಪ್ರಜ್ಞೆಯುಳ್ಳವನಾಗಿ ಎದುರಿಗೆ ನಿಂತಿದ್ದ ದಶರಥಪುತ್ರನಾದ (ಲಕ್ಷ್ಮಣ)ನನ್ನು ಕಂಡನು. ಮತ್ತು ಕೋಪದಿಂದ ಕೆಂಪಾದ ಕಂಗಳುಳ್ಳವನಾಗಿ ಬಾಣಗಳನ್ನು ಬಿಲ್ಲಿನಲ್ಲಿ ಹೂಡಿ ಲಕ್ಷ್ಮಣನನ್ನು ಕುರಿತು ಹೀಗೆಂದನು.

**ಯದಿ ತೇ ಪ್ರಥಮೇ ಯುದ್ಧೇ ನ ದೃಷ್ಟೋ ಮೇ ಪರಾಕ್ರಮಃ ।**
**ಅದ್ಯ ತ್ವಾಂ ದರ್ಶಯಿಷ್ಯಾಮಿ ತಿಷ್ಠೇದಾನೀಂ ವ್ಯವಸ್ಥಿತಃ ॥೨೮॥**

**ಇತ್ಯುಕ್ತ್ವಾ ಸಪ್ತಭಿರ್ಬಾಣೈರಭಿವಿವ್ಯಾಧ ಲಕ್ಷ್ಮಣಮ್ ।**
**ದಶಭಿಶ್ಚ ಹನೂಮಂತಂ ತೀಕ್ಷ್ಣಧಾರೈಶ್ಯರೋತ್ತಮೈಃ ॥೨೯॥**
**ತತಃ ಶರಶತೇನೈವ ಸಂಪ್ರಯುಕ್ತೇನ ವೀರ್ಯವಾನ್ ।**
**ಕ್ರೋಧಾದ್ ದ್ವಿಗುಣಸಂರಬ್ಧೋ ನಿರ್ಬಿಭೇದ ವಿಭೀಷಣಮ್ ॥೩೦॥**

೨೮–೩೦. "ಒಂದು ವೇಳೆ ನಿನಗೆ ಮೊದಲನೆಯ ಯುದ್ಧದಲ್ಲಿ ನನ್ನ ಪರಾಕ್ರಮವು ಕಂಡುಬರಲಿಲ್ಲವಾದರೆ ಈಗ ನಿನಗೆ ತೋರಿಸುವೆನು. ಈಗ ಸರಿಯಾಗಿ ನಿಲ್ಲು" ಹೀಗೆಂದು ಹೇಳಿ ಏಳು ಬಾಣಗಳಿಂದ ಲಕ್ಷ್ಮಣನನ್ನು ಹೊಡೆದನು. ಚೂಪಾದ ಅಲಗುಳ್ಳ ಉತ್ತಮವಾದ ಹತ್ತುಬಾಣಗಳಿಂದ ಹನುಮಂತನನ್ನು ಹೊಡೆದನು. ಅನಂತರ ವೀರ್ಯಶಾಲಿಯಾದ ಅವನು ಕೋಪದಿಂದ ಎರಡರಷ್ಟು ಕೆರಳಿದವನಾಗಿ ಒಂದು ನೂರುಬಾಣಗಳಿಂದ ವಿಭೀಷಣನನ್ನು ಹೊಡೆದನು.

**ಲಕ್ಷ್ಮಣೋಽಪಿ ತಥಾ ಶತ್ರುಂ ಶರವರ್ಷೈರವಾಕಿರತ್ ।**
**ತಸ್ಯ ಬಾಣೈಃ ಸುಸಂವಿದ್ಧಂ ಕವಚಂ ಕಾಂಚನಪ್ರಭಮ್ ॥೩೧॥**
**ವ್ಯಶೀರ್ಯತ ರಥೋಪಸ್ಥೇ ತಿಲಶಃ ಪತಿತಂ ಭುವಿ ।**
**ತತಃ ಶರಸಹಸ್ರೇಣ ಸಂಕ್ರುದ್ಧೋ ರಾವಣಾತ್ಮಜಃ ॥೩೨॥**
**ಬಿಭೇದ ಸಮರೇ ವೀರಂ ಲಕ್ಷ್ಮಣಂ ಭೀಮವಿಕ್ರಮಮ್ ।**
**ವ್ಯಶೀರ್ಯತಾಪತದ್ದಿವ್ಯಂ ಕವಚಂ ಲಕ್ಷ್ಮಣಸ್ಯ ಚ ॥೩೩॥**

೩೧–೩೩. ಲಕ್ಷ್ಮಣನು ಕೂಡ ಹಾಗೆಯೇ ಶತ್ರುವನ್ನು ಬಾಣದ ಮಳೆಯಿಂದ ಆವರಿಸಿಬಿಟ್ಟನು. ಅವನ ಬಾಣಗಳಿಂದ (ಇಂದ್ರಜಿತನ) ಚಿನ್ನದಂತೆ ಹೊಳೆಯುತ್ತಿದ್ದ ಹಾಗೂ ಚೆನ್ನಾಗಿ ತೊಡಿಸಲ್ಪಟ್ಟಿದ್ದ ಕವಚವು ರಥದ ಒಳಗೇ ಹರಿದು ಬಿದ್ದು ನುಚ್ಚು ನೂರಾಯಿತು. ಅನಂತರ ಕುಪಿತನಾದ ರಾವಣಪುತ್ರನು ಸಾವಿರಾರು ಬಾಣಗಳಿಂದ ಭಯಂಕರಪರಾಕ್ರಮಿಯಾದ ವೀರನಾದ ಲಕ್ಷ್ಮಣನನ್ನು ಹೊಡೆದನು. ಆಗ ಲಕ್ಷ್ಮಣನ ದಿವ್ಯಕವಚವೂ ಹರಿದು ಬಿದ್ದು ಹೋಯಿತು.

**ಕೃತಪ್ರತಿಕೃತಾನ್ಯೋನ್ಯಂ ಬಭೂವತುರಭಿದ್ರುತೌ ।**
**ಅಭೀಕ್ಷ್ಣಂ ನಿಃಶ್ವಸಂತೌ ತೌ ಯುಧ್ಯೇತಾಂ ತುಮುಲಂ ಪುನಃ ॥೩೪॥**
**ಶರಸಂವೃತಸರ್ವಾಂಗೌ ಸರ್ವತೋ ರುಧಿರೋಕ್ಷಿತೌ ।**
**ಸುದೀರ್ಘಕಾಲಂ ತೌ ವೀರಾವನ್ಯೋನ್ಯಂ ನಿಶಿತೈಃ ಶರೈಃ ॥೩೫॥**
**ಅಯುಧ್ಯೇತಾಂ ಮಹಾಸತ್ತ್ವೌ ಜಯಾಜಯವಿವರ್ಜಿತೌ ।**

೩೪–೩೫. ಮುನ್ನುಗ್ಗಿದ ಇಬ್ಬರೂ ಒಬ್ಬರಿಗೊಬ್ಬರು ಪ್ರತೀಕಾರ ಮಾಡುತ್ತಾ ಮತ್ತೆಮತ್ತೆ ನಿಟ್ಟುಸಿರುಬಿಡುತ್ತಾ ನಿಬಿಡವಾಗಿ ಯುದ್ಧಮಾಡಿದರು.

ಮೈಯಲ್ಲೆಲ್ಲ ಬಾಣಗಳು ಚುಚ್ಚಿಕೊಂಡವರಾಗಿ ಎಲ್ಲೆಲ್ಲಿಯೂ ರಕ್ತದಿಂದ ತೋಯ್ದುಹೋದವರಾಗಿ ಬಹುದೀರ್ಘಕಾಲ ಬಹಳ ಬಲಶಾಲಿಗಳಾದ ಆ ವೀರರುಗಳು ಪರಸ್ಪರವಾಗಿ ಹರಿತವಾದ ಬಾಣಗಳಿಂದ ಕಾದಾಡುತ್ತಾ ಜಯ ಪರಾಜಯಗಳಿಲ್ಲದೆ ಹೋರಾಡುತ್ತಿದ್ದರು.

**ಏತಸ್ಮಿನ್ನಂತರೇ ವೀರೋ ಲಕ್ಷ್ಮಣಃ ಪಂಚಭಿಃ ಶರೈಃ ।**
**ರಾವಣೇಃ ಸಾರಥಿಂ ಸಾಶ್ವಂ ರಥಂ ಚ ಸಮಚೂರ್ಣಯತ್ ॥೩೬॥**
**ಚಿಚ್ಛೇದ ಕಾರ್ಮುಕಂ ತಸ್ಯ ದರ್ಶಯನ್ ಹಸ್ತಲಾಘವಮ್ ।**
**ಸೋಽನ್ಯತ್ತು ಕಾರ್ಮುಕಂ ಭದ್ರಂ ಸಜ್ಯಂ ಚಕ್ರೇ ತ್ವರಾನ್ವಿತಃ ॥೩೭॥**
**ತಚ್ಚಾಪಮಪಿ ಚಿಚ್ಛೇದ ಲಕ್ಷ್ಮಣಸ್ತ್ರಿಭಿರಾಶುಗೈಃ ।**
**ತಥೈವ ಛಿನ್ನಧನ್ವಾನಂ ವಿವ್ಯಾಧಾನೇಕಸಾಯಕೈಃ ॥೩೮॥**

೩೬-೩೮. ಈ ನಡುವೆ ವೀರನಾದ ಲಕ್ಷ್ಮಣನು ಐದು ಬಾಣಗಳಿಂದ ರಾವಣಪುತ್ರನ ರಥ, ಕುದುರೆ, ಸಾರಥಿ-ಎಲ್ಲವನ್ನೂ ಪುಡಿಮಾಡಿದನು. ತನ್ನ ಕೈಚಳಕವನ್ನು ಪ್ರದರ್ಶಿಸುತ್ತಾ (ಇಂದ್ರಜಿತನ ಕೈಯಲ್ಲಿದ್ದ) ಬಿಲ್ಲನ್ನು ಕತ್ತರಿಸಿದನು. ಅವನು ಬೇಗನೆ ಬೇರೊಂದು ಗಟ್ಟಿಯಾದ ಬಿಲ್ಲನ್ನು ಸಿದ್ಧಗೊಳಿಸಿಕೊಂಡನು. ಲಕ್ಷ್ಮಣನು ಆ ಬಿಲ್ಲನ್ನೂ ವೇಗವಾದ ಮೂರು ಬಾಣಗಳಿಂದ ಕತ್ತರಿಸಿದನು. ಹಾಗೆಯೇ ಮುರಿದ ಧನುಸ್ಸುಳ್ಳ ಅವನನ್ನು ಅನೇಕಬಾಣಗಳಿಂದ ಹೊಡೆದನು.

**ಪುನರನ್ಯತ್ ಸಮಾದಾಯ ಕಾರ್ಮುಕಂ ಭೀಮವಿಕ್ರಮಃ ।**
**ಇಂದ್ರಜಿಲ್ಲಕ್ಷ್ಮಣಂ ಬಾಣೈಃ ಶಿತೈರಾದಿತ್ಯಸಂನಿಭೈಃ ॥೩೯॥**
**ಬಿಭೇದ ವಾನರಾನ್ ಸರ್ವಾನ್ ಬಾಣೈರಾಪೂರಯನ್ ದಿಶಃ ।**

೩೯. ಭಯಂಕರವಾದ ಪರಾಕ್ರಮಿಯಾದ ಇಂದ್ರಜಿತನು ಬೇರೊಂದು ಬಿಲ್ಲನ್ನು ಹಿಡಿದು ಸೂರ್ಯನಂತೆ ಹೊಳೆಯುವ ಬಾಣಗಳಿಂದ ಲಕ್ಷ್ಮಣನನ್ನೂ ಎಲ್ಲಾ ಕಪಿಗಳನ್ನೂ ಹೊಡೆದನು. ದಿಕ್ಕುಗಳನ್ನೆಲ್ಲ ಬಾಣಗಳಿಂದ ತುಂಬಿದನು.

**ತತ ಐಂದ್ರಂ ಸಮಾದಾಯ ಲಕ್ಷ್ಮಣೋ ರಾವಣಿಂ ಪ್ರತಿ ।**
**ಸಂಧಾಯಾಕೃಷ್ಯ ಕರ್ಣಾಂತಂ ಕಾರ್ಮುಕಂ ದೃಢನಿಷ್ಠುರಮ್ ॥೪೦॥**
**ಉವಾಚ ಲಕ್ಷ್ಮಣೋ ವೀರಃ ಸ್ಮರನ್ ರಾಮಪದಾಂಬುಜಮ್ ।**
**ಧರ್ಮಾತ್ಮಾ ಸತ್ಯಸಂಧಶ್ಚ ರಾಮೋ ದಾಶರಥಿರ್ಯದಿ ॥೪೧॥**
**ತ್ರಿಲೋಕ್ಯಾಮಪ್ರತಿದ್ವಂದ್ವಃ ತದೇನಂ ಜಹಿ ರಾವಣಿಮ್ ।**
**ಇತ್ಯುಕ್ತ್ವಾ ಬಾಣಮಾಕರ್ಣಾದ್ ವಿಕೃಷ್ಯ ತಮಜಿಹ್ಮಗಮ್ ॥೪೨॥**
**ಲಕ್ಷ್ಮಣಃ ಸಮರೇ ವೀರಃ ಸಸರ್ಜೇಂದ್ರಜಿತಂ ಪ್ರತಿ ।**

೪೦-೪೨. ಅನಂತರ ಲಕ್ಷ್ಮಣನು ಇಂದ್ರಜಿತನನ್ನು ಕುರಿತು ಐಂದ್ರಾಸ್ತ್ರವನ್ನು ತೆಗೆದುಕೊಂಡು ಜೋಡಿಸಿ ಗಟ್ಟಿಯಾಗಿಯೂ ಒರಟಾಗಿಯೂ ಇದ್ದ

ಬಿಲ್ಲನ್ನು ಕಿವಿಯ ತುದಿಗಳವರೆಗೂ ಜಗ್ಗಿದವನಾಗಿ ಶ್ರೀರಾಮನ ಪಾದಾರವಿಂದ ಗಳನ್ನು ನೆನೆಯುತ್ತಾ ವೀರನಾದ ಲಕ್ಷ್ಮಣನು ಹೀಗೆಂದನು. "ಶ್ರೀರಾಮನು ಧರ್ಮಾತ್ಮನೂ ಸತ್ಯಸಂಧನೂ ಮೂರುಲೋಕಗಳಲ್ಲಿಯೂ ಎದುರಾಳಿಯಿಲ್ಲದ ವನೂ ಆದವನಾಗಿದ್ದರೆ ಎಲೈ ಬಾಣವೆ, ಈ ರಾವಣಪುತ್ರನನ್ನು ಕೊಲ್ಲು'' ಎಂದು ಹೇಳಿ ಸಾರ್ಥಕವಾದ (ಅಮೋಘವಾದ) ಆ ಬಾಣವನ್ನು ಎಳೆದು ವೀರ ನಾದ ಲಕ್ಷ್ಮಣನು ಯುದ್ಧದಲ್ಲಿ ಇಂದ್ರಜಿತನೆಡೆಗೆ ಬಿಟ್ಟನು.

**ಸ ಶರಃ ಸಶಿರಸ್ತ್ರಾಣಂ ಶ್ರೀಮಜ್ಜ್ವಲಿತಕುಂಡಲಮ್ ।**
**ಪ್ರಮಥ್ಯೇಂದ್ರಜಿತಃ ಕಾಯಾತ್ ಪಾತಯಾಮಾಸ ಭೂತಲೇ ॥೪೩॥**
**ತತಃ ಪ್ರಮುದಿತಾ ದೇವಾಃ ಕೀರ್ತಯಂತೋ ರಘೂತ್ತಮಮ್ ।**
**ವವರ್ಷುಃ ಪುಷ್ಪವರ್ಷಾಣಿ ಸ್ತುವಂತಶ್ಚ ಮುಹುರ್ಮುಹುಃ ॥೪೪॥**
**ಜಹರ್ಷ ಶಕ್ರೋ ಭಗವಾನ್ ಸಹ ದೇವೈರ್ಮಹರ್ಷಿಭಿಃ ।**
**ಆಕಾಶೇಽಪಿ ಚ ದೇವಾನಾಂ ಶುಶ್ರುವೇ ದುಂದುಭಿಸ್ವನಃ ॥೪೫॥**
**ವಿಮಲಂ ಗಗನಂ ಚಾಸೀತ್ ಸ್ಥಿರಾಭೂದ್ ವಿಶ್ವಧಾರಿಣೀ ।**

೪೩–೪೫. ಆ ಬಾಣವು ಹೊಳೆಯುತ್ತಿರುವ ಕರ್ಣಾಭರಣಗಳುಳ್ಳ ಕಿವಿ ಗಳುಳ್ಳ ಹಾಗೂ ತಲೆಯ ರಕ್ಷಾಕವಚವುಳ್ಳ ಶ್ರೀಮಂತವಾದ ಇಂದ್ರಜಿತನ ಶಿರಸ್ಸನ್ನು ಶರೀರದಿಂದ ತುಂಡರಿಸಿ ನೆಲದಮೇಲೆ ಕೆಡವಿಬಿಟ್ಟಿತು. ಅನಂತರ ಸಂತುಷ್ಟರಾದ ದೇವತೆಗಳು ಶ್ರೀರಾಮಾನುಜನನ್ನು ಸ್ತುತಿಸುತ್ತಾ ಮತ್ತೆ ಮತ್ತೆ ಹೊಗಳುತ್ತಾ ಹೂವಿನ ಮಳೆಯನ್ನು ಸುರಿಸಿದರು. ಪೂಜ್ಯನಾದ ದೇವೇಂದ್ರನು ಋಷಿಗಳು ಹಾಗೂ ದೇವತೆಗಳೊಡಗೂಡಿ ಸಂತೋಷಗೊಂಡನು. ಆಕಾಶದಲ್ಲಿ ಯೂ ದೇವತೆಗಳಿಂದ ನಗಾರಿಯು ಬಾರಿಸಲ್ಪಟ್ಟ ಶಬ್ದವು ಕೇಳಿಸಿತು. ಆಕಾಶ ವೆಲ್ಲವೂ ನಿರ್ಮಲವಾಯಿತು. ಭೂದೇವಿಯು ಅಚಲಳಾಗಿ ನಿಂತಳು.

**ನಿಹತಂ ರಾವಣಿಂ ದೃಷ್ಟ್ವಾ ಜಯಜಲ್ಪಸಮನ್ವಿತಃ ।**
**ಗತಶ್ರಮಃ ಸಸೌಮಿತ್ರಿಃ ಶಂಖಮಾಪೂರಯದ್ ರಣೇ ॥೪೬॥**
**ಸಿಂಹನಾದಂ ತತಃ ಕೃತ್ವಾ ಜ್ಯಾಶಬ್ದಮಕರೋದ್ ವಿಭುಃ ।**
**ತೇನ ನಾದೇನ ಸಂತುಷ್ಟಾ ವಾನರಾಶ್ಚ ಗತಶ್ರಮಾಃ ॥೪೭॥**
**ವಾನರೇಂದ್ರೈಶ್ಚ ಸಹಿತಃ ಸ್ತುವದ್ಭಿಃ ಹೃಷ್ಟಮಾನಸೈಃ ।**
**ಲಕ್ಷ್ಮಣಃ ಪರಿತುಷ್ಟಾತ್ಮಾ ದದರ್ಶಾಭ್ಯೇತ್ಯ ರಾಘವಮ್ ॥೪೮॥**
**ಹನೂಮದ್ರಾಕ್ಷಸಾಭ್ಯಾಂ ಚ ಸಹಿತೋ ವಿನಯಾನ್ವಿತಃ ।**

೪೬–೪೮. ಇಂದ್ರಜಿತನು ನಿಧನನಾದುದನ್ನು ಕಂಡು ಜಯಶಬ್ದಗಳಿಂದ ಕೂಡಿದ ಲಕ್ಷ್ಮಣನು ಶ್ರಮವಿಲ್ಲದವನಾಗಿ ಆ ಯುದ್ಧರಂಗದಲ್ಲಿ ಶಂಖವನ್ನು ಊದಿದನು. ಅನಂತರ ಸಿಂಹನಾದವನ್ನು ಮಾಡಿ ಬಿಲ್ಲಿನ ಹಗ್ಗವನ್ನು ಸದ್ದು

ಮಾಡಿದನು. ಆ ಧ್ವನಿಯಿಂದ ಸಂತುಷ್ಟರಾದ ಕಪಿಗಳು ಕೂಡ ಆಯಾಸಪರಿಹಾರವನ್ನು ಹೊಂದಿದವರಾಗಿಬಿಟ್ಟರು. ಹೊಗಳುತ್ತಾ, ತೃಪ್ತಿಯಿಂದ ಕೂಡಿದ ಮನಸ್ಸುಳ್ಳವರಾದ ಕಪಿಶ್ರೇಷ್ಠರಿಂದ ಕೂಡಿದ ಲಕ್ಷ್ಮಣನು ಆತ್ಮಸಂತೋಷಯುಕ್ತನಾಗಿ, ವಿನಯದಿಂದ ಕೂಡಿ, ವಿಭೀಷಣ, ಹನುಮಂತ-ಇವರೊಡನೆ ಹೊರಟುಬಂದು ಶ್ರೀರಾಮನನ್ನು ಕಂಡನು.

**ವವಂದೇ ಭ್ರಾತರಂ ರಾಮಂ ಜ್ಯೇಷ್ಠಂ ನಾರಾಯಣಂ ವಿಭುಮ್ ।**
**ತ್ವತ್ಪ್ರಸಾದಾದ್ ರಘುಶ್ರೇಷ್ಠ ಹತೋ ರಾವಣಿರಾಹವೇ ॥೪೯॥**
**ಶ್ರುತ್ವಾ ತಲ್ಲಕ್ಷ್ಮಣಾದ್ ಭಕ್ತ್ಯಾ ತಮಾಲಿಂಗ್ಯ ರಘೂತ್ತಮಃ ।**
**ಮೂರ್ಧ್ನ್ಯವಘ್ರಾಯ ಮುದಿತಃ ಸಸ್ನೇಹಮಿದಮಬ್ರವೀತ್ ॥೫೦॥**
**ಸಾಧು ಲಕ್ಷ್ಮಣ ತುಷ್ಟೋಽಸ್ಮಿ ಕರ್ಮ ತೇ ದುಷ್ಕರಂ ಕೃತಮ್ ।**
**ಮೇಘನಾದಸ್ಯ ನಿಧನೇ ಜಿತಂ ಸರ್ವಮರಿಂದಮ ॥೫೧॥**

೪೯-೫೧. ಹಿರಿಯನೂ ವ್ಯಾಪಕನಾದ ನಾರಾಯಣನ ಸ್ವರೂಪನೂ ಆದ ಸಹೋದರನಾದ ರಾಮನನ್ನು ನಮಸ್ಕರಿಸಿದನು. "ಎಲೈ ರಘುಶ್ರೇಷ್ಠನೆ, ನಿನ್ನ ಅನುಗ್ರಹದ ಬಲದಿಂದ ರಾವಣಿಯು ಯುದ್ಧದಲ್ಲಿ ಕೊಲ್ಲಲ್ಪಟ್ಟನು" ಎಂದನು. ಲಕ್ಷ್ಮಣನಿಂದ ಭಕ್ತಿಪೂರ್ವಕವಾಗಿ ಹೇಳಲ್ಪಟ್ಟ ಆ ಮಾತನ್ನು ಕೇಳಿ ರಘುರಾಮನು ಅವನನ್ನು ಆಲಿಂಗಿಸಿಕೊಂಡು ನೆತ್ತಿಯನ್ನು ಮೂಸಿ ಸಂತೋಷಯುಕ್ತನಾಗಿ ಪ್ರೇಮದಿಂದ ಹೀಗೆಂದನು : "ಲಕ್ಷ್ಮಣನೆ, ಒಳ್ಳೆಯದು ಮಾಡಿದೆಯಪ್ಪ ! ಬಹಳ ದುಸ್ಸಾಧ್ಯವಾದ ಕೆಲಸವನ್ನು ಮಾಡಿರುವೆ. ನಾನು ಬಹಳ ಸಂತೋಷಗೊಂಡಿರುವೆನು. ಇಂದ್ರಜಿತನನ್ನು ಕೊಂದದ್ದರಿಂದ ಎಲೈ ಶತ್ರುನಾಶಕನೆ, ಎಲ್ಲರನ್ನೂ ಗೆದ್ದಂತಾಗಿದೆ."

**ಅಹೋರಾತ್ರೈಸ್ತ್ರಿಭಿರ್ವೀರಃ ಕಥಂಚಿತ್ ವಿನಿಪಾತಿತಃ ।**
**ನಿಃಸಪತ್ನಃ ಕೃತೋಽಸ್ಮ್ಯದ್ಯ ನಿರ್ಯಾಸ್ಯತಿ ಹಿ ರಾವಣಃ ॥೫೨॥**
**ಪುತ್ರಶೋಕಾನ್ಮಯಾ ಯೋದ್ಧುಂ ತಂ ಹನಿಷ್ಯಾಮಿ ರಾವಣಮ್ ।**

೫೨. "ಮೂರು ಹಗಲು, ಮೂರು ರಾತ್ರಿಗಳ ಕಾಲದ ನಿರಂತರ ಯುದ್ಧದಿಂದ ಆ ವೀರನು ಹೇಗೋ ಕಷ್ಟದಿಂದ ಕೆಡವಲ್ಪಟ್ಟನು. ಈಗ ನಾನು ಶತ್ರುವಿಲ್ಲದವನಾದೆನು. ಇನ್ನು ಮುಂದೆ ಪುತ್ರಶೋಕದಿಂದ ಕೂಡಿದ ರಾವಣನು ನನ್ನೊಡನೆ ಯುದ್ಧಮಾಡುವದಕ್ಕೆ ಬರಲಿರುವನು. ಆ ರಾವಣನನ್ನು ಕೊಲ್ಲಲಿರುವೆನು."

**ಮೇಘನಾದಂ ಹತಂ ಶ್ರುತ್ವಾ ಲಕ್ಷ್ಮಣೇನ ಮಹಾಬಲಮ್ ।**
**ರಾವಣಃ ಪತಿತೋ ಭೂಮೌ ಮೂರ್ಛಿತಃ ಪುನರುತ್ಥಿತಃ ॥೫೩॥**

**ವಿಲಲಾಪಾತಿದೀನಾತ್ಮಾ ಪುತ್ರಶೋಕೇನ ರಾವಣಃ ।**
**ಪುತ್ರಸ್ಯ ಗುಣಕರ್ಮಾಣಿ ಸಂಸ್ಮರನ್ ಪರ್ಯದೇವಯತ್ ॥೫೪॥**
**ಅದ್ಯ ದೇವಗಣಾಃ ಸರ್ವೇ ಲೋಕಪಾಲಾ ಮಹರ್ಷಯಃ ।**
**ಹತಮಿಂದ್ರಜಿತಂ ಜ್ಞಾತ್ವಾ ಸುಖಂ ಸ್ವಪ್ಸ್ಯಂತಿ ನಿರ್ಭಯಾಃ ।೫೫॥**
**ಇತ್ಯಾದಿ ಬಹುಶಃ ಪುತ್ರಲಾಲಸೋ ವಿಲಲಾಪ ಹ ।**

೫೨-೫೫. ಮೇಘನಾದ (ಇಂದ್ರಜಿತ್)ನು ಲಕ್ಷ್ಮಣನಿಂದ ಹತನಾದ ಸುದ್ದಿಯನ್ನು ಕೇಳಿ ರಾವಣನು ಮೂರ್ಛಿತನಾಗಿ ನೆಲದಲ್ಲಿ ಬಿದ್ದು ಮತ್ತೆ ಮೇಲೆದ್ದನು. ಬಹಳವಾಗಿ ದೈನ್ಯದಿಂದ ಕೂಡಿದವನಾಗಿ ರಾವಣನು ಪುತ್ರಶೋಕದಿಂದ ತುಂಬಿದವನಾಗಿ ಅವನ ಗುಣಗಳನ್ನೂ ಕಾರ್ಯಗಳನ್ನೂ ನೆನೆಯುತ್ತಾ ಅತ್ತನು. 'ಇನ್ನು ಮುಂದೆ ದೇವಗಣಗಳೂ ಮಹರ್ಷಿಗಳೂ ಲೋಕಪಾಲಕರುಗಳೂ ಇಂದ್ರಜಿತನು ಸತ್ತುದ್ದನ್ನು ತಿಳಿದು ಹೆದರಿಕೆಯಿಲ್ಲದೆ ಸುಖವಾಗಿ ನಿದ್ರಿಸಲಿರುವರು.' ಹೀಗೆಲ್ಲ ರೀತಿಯಿಂದ ಪುತ್ರಪ್ರೇಮದಿಂದ ತುಂಬಿದವನಾಗಿ ದುಃಖಿಸಿದನು.

**ತತಃ ಪರಮಸಂಕ್ರುದ್ಧೋ ರಾವಣೋ ರಾಕ್ಷಸಾಧಿಪಃ ।**
**ಉವಾಚ ರಾಕ್ಷಸಾನ್ ಸರ್ವಾನ್ ನಿನಾಶಯಿಷುರಾಹವೇ ॥೫೬॥**
**ಸ ಪುತ್ರವಧಸಂತಪ್ತಃ ಶೂರಃ ಕ್ರೋಧವಶಂ ಗತಃ ।**
**ಸಂವೀಕ್ಷ್ಯ ರಾವಣೋ ಬುದ್ಧ್ಯಾ ಹಂತುಂ ಸೀತಾಂ ಪ್ರದುದ್ರುವೇ ॥**
**ಖಡ್ಗಪಾಣಿಮಥಾಯಾಂತಂ ಕ್ರುದ್ಧಂ ದೃಷ್ಟ್ವಾ ದಶಾನನಮ್ ।**
**ರಾಕ್ಷಸೀಮಧ್ಯಗಾ ಸೀತಾ ಭಯಶೋಕಾಕುಲಾಭವತ್ ।೫೮॥**

೫೬-೫೮. ಅನಂತರ ಬಹಳವಾಗಿ ಸಿಟ್ಟುಗೆದ್ದ ರಾಕ್ಷಸಾಧಿಪತಿಯಾದ ರಾವಣನು ಯುದ್ಧದಲ್ಲಿ ಎಲ್ಲ ಶತ್ರುಗಳನ್ನೂ ನಾಶಗೊಳಿಸಿಬಿಡುವ ಹಟದಿಂದ ಎಲ್ಲ ರಾಕ್ಷಸರನ್ನೂ (ಯುದ್ಧಮಾಡಲು) ಹೇಳಿದನು. ಶೂರನಾದ ಅವನು ಪುತ್ರವಧೆಯಿಂದ ದುಃಖಿತನಾಗಿ ಕೋಪಕ್ಕೆ ವಶನಾಗಿ ಅದೇ ಬುದ್ಧಿಯಿಂದಾಲೋಚಿಸಿ ಸೀತೆಯನ್ನು ಕೊಲ್ಲಲು ವೇಗದಿಂದ ಹೊರಟನು. ಕತ್ತಿಯನ್ನು ಹಿಡಿದು ತನ್ನಕಡೆಗೆ ಬರುತ್ತಿರುವ ಕುಪಿತನಾದ ರಾವಣನನ್ನು ಕಂಡು ರಾಕ್ಷಸಿಯರ ನಡುವೆಯಿದ್ದ ಸೀತೆಯು ಭಯದಿಂದಲೂ ದುಃಖದಿಂದಲೂ ವ್ಯಾಕುಲಚಿತ್ತಳಾದಳು.

**ಏತಸ್ಮಿನ್ನಂತರೇ ತಸ್ಯ ಸಚಿವೋ ಬುದ್ಧಿಮಾನ್ ಶುಚಿಃ ।**
**ಸುಪಾರ್ಶ್ವೋ ನಾಮ ಮೇಧಾವೀ ರಾವಣಂ ವಾಕ್ಯಮಬ್ರವೀತ್ ॥೫೯॥**
**ನನು ನಾಮ ದಶಗ್ರೀವ ಸಾಕ್ಷಾದ್ ವೈಶ್ರವಣಾನುಜಃ ।**
**ವೇದವಿದ್ಯಾವ್ರತಸ್ನಾತಃ ಸ್ವಕರ್ಮಪರಿನಿಷ್ಠಿತಃ ॥೬೦॥**
**ಅನೇಕಗುಣಸಂಪನ್ನಃ ಕಥಂ ಸ್ತ್ರೀವಧಮಿಚ್ಛಸಿ ।**

೫೯-೬೦. ಈ ನಡುವೆ ಬುದ್ಧಿವಂತನೂ ಜಾಣನೂ ಆದ (ರಾವಣನ) ಒಬ್ಬ ಮಂತ್ರಿಯಾದ ಸುಪಾರ್ಶ್ವನೆಂಬ ಮೇಧಾವಿಯು ರಾವಣನನ್ನು ಕುರಿತು ಇಂತೆಂದನು : "ಎಲೈ ದಶಕಂಠನೆ, ನೀನಾದರೊ, ಕುಬೇರನ ತಮ್ಮನಾಗಿದ್ದು ವೇದವಿದ್ಯೆಗಳನ್ನು ಕಲಿತು ನಿಷ್ಣಾತನಾಗಿದ್ದು ನಿನ್ನ ಕರ್ಮಗಳಲ್ಲಿ ನಿಷ್ಠನಾಗಿರುವವನಾಗಿ ಅನೇಕಗುಣಗಳಿಂದ ಕೂಡಿದವನಾಗಿರುವೆಯಲ್ಲವೆ ? ಹೀಗಿರುವಲ್ಲಿ ಸ್ತ್ರೀವಧೆಯನ್ನು ಹೇಗೆ ತಾನೆ ಮಾಡಲಿಚ್ಛಿಸುವೆ ?

**ಅಸ್ಮಾಭಿಃ ಸಹಿತೋ ಯುದ್ಧೇ ಹತ್ವಾ ರಾಮಂ ಚ ಲಕ್ಷ್ಮಣಮ್ ।**
**ಪ್ರಾಪ್ಸ್ಯಸೇ ಜಾನಕೀಂ ಶೀಘ್ರಮಿತ್ಯುಕ್ತಃ ಸ ನ್ಯವರ್ತತ ।೬೧॥**

**ತತೋ ದುರಾತ್ಮಾ ಸುಹೃದಾ ನಿವೇದಿತಂ**
**ವಚಃ ಸುಧರ್ಮ್ಯಂ ಪರಿಗೃಹ್ಯ ರಾವಣಃ ।**
**ಗೃಹಂ ಜಗಾಮಾಶು ಶುಚಾ ವಿಮೂಢಧೀಃ**
**ಪುನಃ ಸಭಾಂ ಚ ಪ್ರಯಯೌ ಸುಹೃದ್ವೃತಃ ।೬೨॥**

೬೧-೬೨. ನಮ್ಮೊಡನೆ ಕೂಡಿದವನಾಗಿ ಯುದ್ಧದಲ್ಲಿ ರಾಮನನ್ನೂ ಲಕ್ಷ್ಮಣನನ್ನೂ ಕೊಂದು ಬೇಗನೆ ಸೀತೆಯನ್ನು ಪಡೆಯಲಿರುವೆ" ಹೀಗೆಂದು ಹೇಳಿ ಅವನು ಹಿಂದಿರುಗಿದನು. ಅನಂತರ ದುರಾತ್ಮನಾದ ರಾವಣನು ಸ್ನೇಹಿತನಿಂದ ತಿಳಿಸಲ್ಪಟ್ಟ ಧರ್ಮಬದ್ಧವಾದ ಒಳ್ಳೆಯ ಮಾತನ್ನು ಸ್ವೀಕರಿಸಿ ಬೇಗನೆ ಮನೆಗೆ ಬಂದನು. ಮತ್ತೆ ಶೋಕದಿಂದ ದಿಕ್ಕುತೋಚದವನಾಗಿ ಸ್ನೇಹಿತರೊಡನೆ ಮಂತ್ರಾಲೋಚನಸಭೆಯನ್ನು ಪ್ರವೇಶಿಸಿದನು.

ಇತಿ ಶ್ರೀಮದಧ್ಯಾತ್ಮರಾಮಾಯಣೇ ಯುದ್ಧಕಾಂಡೇ
ನವಮಃ ಸರ್ಗಃ

---

## ಹತ್ತನೆಯ ಸರ್ಗ

**ಶ್ರೀ ಮಹಾದೇವ ಉವಾಚ—**

**ಸ ವಿಚಾರ್ಯ ಸಭಾಮಧ್ಯೇ ರಾಕ್ಷಸೈಃ ಸಹ ಮಂತ್ರಿಭಿಃ ।**
**ನಿರ್ಯಯೌ ಯೋಽವಶಿಷ್ಟಾಸ್ತೈಃ ರಾಕ್ಷಸೈಃ ಸಹ ರಾಘವಮ್ ॥೧॥**
**ಶಲಭಃ ಶಲಭೈರ್ಯುಕ್ತಃ ಪ್ರಜ್ವಲಂತಮಿವಾನಲಮ್ ।**
**ತತೋ ರಾಮೇಣ ನಿಹತಾಃ ಸರ್ವೇ ತೇ ರಾಕ್ಷಸಾ ಯುಧಿ ॥೨॥**
**ಸ್ವಯಂ ರಾಮೇಣ ನಿಹತಃ ತೀಕ್ಷ್ಣಬಾಣೇನ ವಕ್ಷಸಿ ।**
**ವ್ಯಥಿತಃ ತ್ವರಿತಂ ಲಂಕಾಂ ಪ್ರವಿವೇಶ ದಶಾನನಃ ॥೩॥**

೧-೩. ಶ್ರೀ ಮಹಾದೇವನಿಂತೆಂದನು : ಅವನು ಸಭೆಯಲ್ಲಿ ವಿಚಾರ ಮಾಡಿದ ಮೇಲೆ ಯಾವ ರಾಕ್ಷಸರುಗಳು ಉಳಿದುಕೊಂಡಿದ್ದರೋ ಅವರೊಡಗೂಡಿ ಬೆಂಕಿಯ ಹುಳುವು ಉಳಿದ ಹುಳುಗಳೊಡಗೂಡಿ ಉರಿಯುವ ಬೆಂಕಿಯೊಡನೆ ಯುದ್ಧಕ್ಕೆ ಹೊರಟಂತೆ ರಾಮನೊಡನೆ ಯುದ್ಧಮಾಡಲು ಹೊರಟನು. ಅನಂತರ ಯುದ್ಧದಲ್ಲಿ ರಾಮನಿಂದ ಹೊಡೆಯಲ್ಪಟ್ಟ ಎಲ್ಲಾ ರಾಕ್ಷಸರೂ ಹಿಮ್ಮೆಟ್ಟಿದರು. ತಾನೇ ಸ್ವತಃ ಹರಿತವಾದ ಬಾಣದಿಂದ ರಾಮನಿಂದ ಎದೆಯಲ್ಲಿ ಹೊಡೆಯಲ್ಪಟ್ಟು ಬಹಳ ನೋವುಂಟಾದವನಾಗಿ ರಾವಣನು ಬೇಗನೆ ಲಂಕೆಯನ್ನು ಪ್ರವೇಶಿಸಿಬಿಟ್ಟನು.

**ದೃಷ್ಟ್ವಾ ರಾಮಸ್ಯ ಬಹುಶಃ ಪೌರುಷಂ ಚಾಪ್ಯಮಾನುಷಮ್ ।**
**ರಾವಣೋ ಮಾರುತೇಶ್ಚೈವ ಶೀಘ್ರಂ ಶುಕ್ರಾಂತಿಕಂ ಯಯೌ ॥೪॥**
**ನಮಸ್ಕೃತ್ಯ ದಶಗ್ರೀವಃ ಶುಕ್ರಂ ಪ್ರಾಂಜಲಿರಬ್ರವೀತ್ ।**
**ಭಗವನ್ ರಾಘವೇಣೈವಂ ಲಂಕಾ ರಾಕ್ಷಸಯೂಥಪೈಃ ॥೫॥**
**ವಿನಾಶಿತಾ ಮಹಾದೈತ್ಯಾಃ ನಿಹತಾಃ ಪುತ್ರಬಾಂಧವಾಃ ।**
**ಕಥಂ ಮೇ ದುಃಖಸಂದೋಹಸ್ತ್ವಯಿ ತಿಷ್ಠತಿ ಸದ್ಗುರೌ ॥೬॥**

೪-೬. ಶ್ರೀರಾಮನ ಹಾಗೂ ಹನುಮಂತನ ಹೆಚ್ಚಿನ ಅಮಾನುಷವಾದ ಪರಾಕ್ರಮವನ್ನು ಕಂಡು ಬೇಗನೆ ಶುಕ್ರಾಚಾರ್ಯನ ಸಮೀಪಕ್ಕೆ ಹೋದನು. ರಾವಣನು ಶುಕ್ರನಿಗೆ ನಮಸ್ಕರಿಸಿ ಕೈಮುಗಿದುಕೊಂಡು ಹೀಗೆಂದನು : 'ಪೂಜ್ಯನೆ, ರಾಮನಿಂದ ಲಂಕೆಯೂ ಮಹಾದೈತ್ಯರುಗಳೂ ರಾಕ್ಷಸಸೇನಾಪತಿಗಳ ಸಮೇತ ನಾಶಗೊಳಿಸಲ್ಪಟ್ಟಿತು. ನನ್ನ ಮಕ್ಕಳೂ ನೆಂಟರುಗಳೂ ಹಾಳಾದರು. ಸದ್ಗುರುವಾದ ನೀನಿರಲಾಗಿ ನನಗೆ ಹೇಗೆ ತಾನೆ ಈ ದುಃಖಸಮೂಹವು ಬಂದೊದಗಿತು ?

**ಇತಿ ವಿಜ್ಞಾಪಿತೋ ದೈತ್ಯಗುರುಃ ಪ್ರಾಹ ದಶಾನನಮ್ ।**
**ಹೋಮಂ ಕುರು ಪ್ರಯತ್ನೇನ ರಹಸಿ ತ್ವಂ ದಶಾನನ ॥೭॥**
**ಯದಿ ವಿಘ್ನೋ ನ ಚೇತ್ ಹೋಮೇ ತರ್ಹಿ ಹೋಮಾನಲೋತ್ಥಿತಃ।**
**ಮಹಾನ್ ರಥಶ್ಚ ವಾಹಾಶ್ಚ ಚಾಪಸ್ತೂಣೀರಸಾಯಕಾಃ ॥೮॥**
**ಸಂಭವಿಷ್ಯಂತಿ ತೈರ್ಯುಕ್ತಸ್ತ್ವಮಜೇಯೋ ಭವಿಷ್ಯಸಿ ।**
**ಗೃಹಾಣ ಮಂತ್ರಾನ್ ಮದ್ದತ್ತಾನ್ ಗಚ್ಛ ಹೋಮಂ ಕುರು ದ್ರುತಮ್**

೭-೯. ಹೀಗೆ ವಿಜ್ಞಾಪಿಸಲ್ಪಟ್ಟ ಆ ದೈತ್ಯಗುರುವು ರಾವಣನನ್ನು ಕುರಿತು ಹೀಗೆಂದನು. 'ಎಲೈ ದಶಾನನನೆ, ನೀನು ಗುಟ್ಟಾಗಿ ಒಂದು ಹೋಮವನ್ನು ಮಾಡು. ಒಂದು ವೇಳೆ ಹೋಮದಲ್ಲಿ ವಿಘ್ನವು ಬಾರದಿದ್ದಲ್ಲಿ ಆಗ ಹೋಮದ ಅಗ್ನಿಯಿಂದ ಎದ್ದು ಬರಲಿರುವ ದೊಡ್ಡ ರಥ, ಕುದುರೆಗಳು, ಧನುಸ್ಸು, ಬಾಣ

Without any cause delusion of the nacre-silver (the silver that appears in the nacre) does not arise ; that delusion arises because that nacre shines as silver alone. But in the present context Atman is not like un-Atman ; He is of a nature opposed to that (un-Atman) alone. Even so, how is this delusion brought about ? In the same way, the delusion of "two moons" has been caused by the defect of the cataract of the eyes. But in the present instance, for the delusion of misconceiving Atman to be un-Atman or un-Atman to be Atman to occur who has got any defect of the type of the cataract of the eyes ? If it is not there, how could this delusion have occurred ? – such a doubt arises.

Answer : "Adhyaasa" is an act, a dealing; therefore, it should occur at a particular time–this conception alone has given room for this doubt. It is not proper at all to think that all that is stated with the aid of predicates or verbs must have originated or begun in time. In the statement–"there the hill stands", because the word 'stands' denotes the action of standing, the statement does not purport to mean that the hill which was hitherto sitting or roaming about is now standing. If it is stated that "Bharata, who is seen in the picture, is receiving the wooden sandals from Rama", the meaning to the effect that the action or dealing of Bharata receiving (the wooden sandals) is taking place need not be taken.

In the same manner, the purport of writing in the Bhaashya that Adhyaasa is 'of the form of

misconception' is to be understood. Pratyaya means knowledge ; it is true that it appears through a certain thought occurring at the time of knowing the external objects. Even so, there is no restriction whatsoever for the misconception – Mithyaa Pratyaya -about Atman to be beginningless. By nature alone such a misconception exists in the minds of people and not that it is a certain thought that has originated at any time whatsoever. For this reason alone it is called Mithyaa Pratyaya 'Roopa' – meaning, 'like the misconception'.

Similarly, just because it is stated that 'people have misconceived Atman and un–Atman one for other', to take it that the action of misconceiving has begun at a certain point of time is not relevant at all. Besides, "Atman is real, un–Atman is unreal" – this is the truth taught, is it not ? If un-Atman is superimposed in or misconceived in Atman-i.e. just as the people are taking the nacre as silver if they have thought Atman to be un–Atman through delusion – then just as, although the nacre-silver (the silver of the nacre) is a false appearance, there is real silver existing separately, the un-Atman which is misconceived in Atman should also exist independently somewhere else, is it not ? – in this way also one can doubt ! That is also not proper, because here the illustration of the nacre–silver has been given only to state that Atman has been wrongly understood as un-Atman and not to discuss the remaining aspects (of the illustration). For this reason only, the rea-

soning of the types of – (l) just as there is similarity between the nacre shining like silver, there is no such similarity between Atman and un-Atman ; just as there is the defect of the cataract in the eye for the second moon to be seen, here there is no defect in any one ! – cannot be sustained. There is no room what soever for these kinds of chicanery (pettifogging- after it is shown that there isAdhyaasa or misconception in every one's experience.

Question : In these illustrations of the nacre-silver, the second moon, the thing in which there is superimposition as well as the thing which is superimposed – both these are objects:i.e. they are objects appearing to our knowledge. Therefore there is a possibility of knowing one as the other through delusion. But in the illustrated, Atman is the subject, one who knows ; un–Atman is the object. That being the case, how is it possible to misconceive one for the other ?

Answer : This also is an objection raised predominantly based on dialectic. After it is established that it is Adhyaasa on the strength of universal experience, to argue in the manner - 'how dit it come about ? It should not have !' on the strength of dialectic, it can never be proper. Even then, if a counter-argument, is shown against this argument, then there will arise faith to the effect that it is not improbable after all for Adhyaasa to have been there; it also might have been there. Thereafter if it is substantiated by universal experience there will be all the

more strength of veracity attached to the teaching. For this reason, Sri Shankara has stated a solution for this also : " *Na Taavadayam Ekaantenaavishayaha* । *Asmatpratyayavishayatwaat* ". In this sentence of Sri Shankara there are two parts; this is the first part. There is no hard rule at all that this Atman is never an object, for He is an object to ' Asmatpratyaya ' – the notion of "I". The wise common people as well as Meemaamsakaas (followers of Jaimini's school of Purva Meemaamsa giving predominance to the Karma Kaanda of the Vedas) and such other exponents of the scriptural texts have accepted the fact that the essential nature of Atman or the Self appears as an object to the "I" notion or knowledge. It is possible to superimpose on that Atman the qualities of the body, the senses etc. Because, here Atman is also an object, and old age and death etc. are also objects; therefore, one object can be superimposed on another object, is it not ? This is the meaning of this convincing statement.

(Here the word 'Adhyaasa' is a technical term. This is 'seen to be variously called "Adhyaaroapa", "Bhraanti", "Vikalpa" in the Bhaashyas. For all usages like misconceiving, superimposing, to get deluded in such and such a manner, distorting – the only meaning is understanding wrongly, conceiving a thing which is not there. Thus that which is conceived is 'called 'Adhyastha', 'Adhyaaroapita', 'Vikalpita' (or 'Vikalpa') ; that in which (any other

thing) is conceived is called by the word 'Aaspada' in the Bhaashya. The word 'Adhisthaana' is used in the Vyaakhyaanas or sub-commentaries on Sri Shankara's Bhaashyas by post-Shankara Vedaantins, but in the Bhaayas (of Sri Shankara) this word 'Adhisthaana' is seen to have been used in the senses of 'Aadhaara' or support, 'Shareera' or the body. If the Jijnaasus or aspirants keep this fact in mind, then there will be no confusion).

What is stated above is not the final solution of the teaching of the truth, because the teaching of Vedaanta is only that Atman is not an object to any conception or notion. In this regard Sri Shankara's final statement is as follows :

"Aparoakshatwaatcha Pratyagaatmaprasiddhehe । Na Chaayamasti Niyamaha Purovaasthita Eva Vishaye Vishayaanta-ramadhyasitavyamiti । Apratyakshepi Hi Aakaashe Baalaaha Talamalinatwaadi Adhyasyanti । Evam Aviruddhaha Pratyagaa-tmanyapi Anaatmaadhyaasaha ॥

"Pratyagaatman or the innermost Atman is familiar because He is most intimate alone" – the purport of this statement must be clearly understood after one-minded ratiocination. Because, our absol-utely essential nature which is called 'Brahman' in the scriptures is described in the Brihadaaranyaka Upanishad 3-4-1 as "Brahman, who is directly and intimately intuited, who is Atman innermost among all things". It is the Transcendental Reality of our Being without any interval or recess in between, what

is not objective or external; that is innermost among all the selves that we have believed to be our form. Therefore, It is self-established. For that reason alone, sufficiently enough, it is possible to misconceive un-Atman in this Atman as well as to superimpose Atman or un-Atman. There is no rigid rule at all that just as people misconceive a snake in a rope or a man in a stump of a tree, they misconceive in an object in front alone another thing. For, the sky is not seen by anybody as an object which is in front; even so, all people think that 'the sky is polluted at the bottom' and believe that there is a lower region for the sky and there is pollution of the sky. The fact that people conceive in one familiar thing another familiar thing alone is seen in life. In the same manner, it is probable to misconceive in our innermost Atman – although He is never an object - the form of "I" as well as the qualities of the body, the senses etc. As Atman who is "Asmatpratyaya Vishaya" (i.e. who is known by the "I" notion) is accepted in other schools of philosophy as one in whom people superimpose the qualities of the body, the senses etc. this solution is first (tentatively) stated. Just as, although old age and death etc., which are the qualities of the body, are objects, the followers of other schools of philosophy have accepted them to have been misconceived in Atman who is the subject or knower and who is the object of the "I" notion (Ahampratyayagamya), similarly agentship, enjoyership, pleasure and pain etc. can be misconceived in the self-established Atman though He is not

an object. To point out this implication, this first or preliminary solution has been stated. This should be clearly understood. Anyway, it is established now that the mutual misconception between Atman and un-Atman is not contrary to reason. The fact that this is seen in every one's experience also should not be forgotten here.

---

## VIII. The Cause for Avidya

Question : Even after you have stated that Adhyaasa is established as being beginningless I am not able to understand the cause for misconceiving my Atman, who is pure and of the essential nature of Consciousness, as of the form of un-Atman. To say that one who is of the essential nature of absolutely innate or innermost Consciousness has without any cause misconceived oneself and is carrying on transactions as "I" and "mine" looks to be impossible only, is it not ?

Answer ; To this, at the outset, an answer is written in the Bhaashya : " Itaretaraavivekena Atyanta-viviktayoardharmadharminoah Mithyaajnaananimittaha Satyaa-nrute Mithuneekrutya 'Ahamidam Mamedam' Iti Naisargikoayam Loaka Vyavahaaraha."

Atman, His qualities; un-Atman, its qualities -- these are totally different. Atman is " real " and of the essential nature of Consciousness, un-Atman comprising the Antahkarana i.e. mind etc.

which are unreal, 'Anrita', like the unreal and false appearances projected by dream and magic, and their qualities - because people have not discriminated between these two, they mix up both of them and carry on transactions as "I" and "mine" and to do so is natural to them ; this is not a misconception that has occurred once in time. To argue that this Adhyaasa is conceived at a particular point of time is utterly ridiculous. Because, time also is un-Atman only, unreal only ; therefore, that is also superimposed. This being so, "then", "now", "in future" - if such qualities are superimposed on Adhyaasa, then that itself will be another Adhyaasa only. What else can it be ?

**For this natural ( Naisargika ) transaction the cause means** misconception alone, Adhyaasa only ; why is this misconception deluding us ? - Because, we have not known the Truth ; because, we have not known the true nature of Atman and un-Atman which are totally and eternally different. Just as it is natural to carry on the transaction by misconceiving the rope as snake because the truth of the rope is not apprehended, similarly this natural empirical transaction of beginningless delusion has taken place.

It does not seem to be probable that Atman who is of the essential nature of eternally Pure Consciousness does not know Himself ! - this is not a proper doubt. People, who do not have the capacity of determining the nature of a thing after discrimination, suffer because of misapprehension and this

## ಅಧ್ಯಾತ್ಮಪ್ರಕಾಶಕಾರ್ಯಾಲಯ, ಬೆಂಗಳೂರುಶಾಖೆ,

**ನಂ. 68, ೨ನೆಯ ಬ್ಲಾಕ್, ತ್ಯಾಗರಾಜನಗರ, ಬೆಂಗಳೂರು-560028**

(ಸಂಸ್ಥಾಪಕರು : ಪ. ಪ. ಶ್ರೀಸಚ್ಚಿದಾನಂದೇಂದ್ರಸರಸ್ವತೀಸ್ವಾಮಿಗಳವರು)

**1983ನೇ ಡಿಸೆಂಬರ್ ಮಾಹೆಯಲ್ಲಿ ನಡೆಯುವ**

**ವಿಶೇಷ ಉಪನ್ಯಾಸಗಳು ; ಸಂಜೆ 5 ರಿಂದ 6 ರ ವರೆಗೆ.**

3-12-83ನೆಯ ಶನಿವಾರ

ಪಂಡಿತ್ ಎನ್. ವಿ. ಅನಂತರಾಮಯ್ಯನವರಿಂದ

**"ಮರ್ಯಾದಾಪುರುಷೋತ್ತಮ"**

4-12-83ನೆಯ ಭಾನುವಾರ

ಪ್ರೊ. ಕೆ. ರಾಜೀವಲೋಚನರವರಿಂದ

**"ವೇದಾಂತದೇಶಿಕಾಚಾರ್ಯರ ಕೊಡುಗೆ"**

10-12-83ನೆಯ ಶನಿವಾರ

ಪ್ರೊ. ಎಸ್. ಸುಬ್ಬರಾಯಶಾಸ್ತ್ರಿಗಳಿಂದ **"ಧರ್ಮಶಾಸ್ತ್ರಗಳು ಭಾಗ-III"**

11-12-83ನೆಯ ಭಾನುವಾರ

ಪ್ರೊ. ಬಿ. ಭೀಮಸೇನರಾವ್‌ರವರಿಂದ **"ಪೂರ್ವರಾಮಾಯಣಮ್"**

17-12-83ನೆಯ ಶನಿವಾರ

ವೇ॥ ಬ್ರ॥ ಶ್ರೀ॥ ಕೆ. ಜಿ. ಸುಬ್ರಾಯಶರ್ಮರವರಿಂದ

**"ಗೀತೆಯೂ ಉಪನಿಷತ್ತುಗಳೂ"**

18-12-83ನೆಯ ಭಾನುವಾರ

ವೇ॥ ಬ್ರ॥ ಶ್ರೀ॥ ಕೆ. ಜಿ. ಸುಬ್ರಾಯಶರ್ಮರವರಿಂದ

**"ಗೀತೆಯಲ್ಲಿ ಜ್ಞಾನೋಪದೇಶ"**

24-12-83ನೆಯ ಶನಿವಾರ

ವೇ॥ ಬ್ರ॥ ಶ್ರೀ॥ ಕೆ. ಜಿ. ಸುಬ್ರಾಯಶರ್ಮರವರಿಂದ

**"ಕರ್ಮ-ಕರ್ಮಯೋಗ-ಕರ್ಮಾಭಾಸಗಳು"**

25-12-83ನೆಯ ಭಾನುವಾರ

ಶ್ರೀ॥ ಎಂ. ಅಶ್ವತ್ಥನಾರಾಯಣ, ಮುತ್ತೂರ್, M.Sc., ರವರಿಂದ

**"ಜ್ಯೋತಿಷ್ಯವು ಮೂಢನಂಬಿಕೆಯೆ ?"**

31-12-83ನೆಯ ಶನಿವಾರ

ಪ. ಪ. ಬ್ರ॥ ಶ್ರೀಶ್ರೀ ಜ್ಞಾನಾನಂದೇಂದ್ರಸರಸ್ವತೀಸ್ವಾಮಿಗಳವರ
ಪ್ರಥಮವಾರ್ಷಿಕಾರಾಧನಪ್ರಯುಕ್ತ ವಿಶೇಷಕಾರ್ಯಕ್ರಮ.

ವೇ॥ಬ್ರ॥ಶ್ರೀ॥ ಕೆ.ಜಿ. ಸುಬ್ರಾಯಶರ್ಮರವರಿಂದ ಉಪನ್ಯಾಸ. **"ಸಂನ್ಯಾಸ"**

**ಎಲ್ಲರಿಗೂ ಆದರದ ಸುಸ್ವಾಗತ.**

ಬೆಂಗಳೂರು-560028 **ಕೆ. ಜಿ. ಸುಬ್ರಾಯಶರ್ಮ,**

ತಾ॥ 1-12-1983. ಕಾರ್ಯದರ್ಶಿ.

**ADHYATMA Prakasha** Regd. No. KRNI-5

Registered with the Registrar of News-papers for India under No. R. N. 13244/57

## ಕೇಳಿರಿ

ದೇವತೆಗಳನ್ನು ಭಕ್ತಿಯಿಂದ ಉಪಾಸನೆಮಾಡಿದರೆ, ಅವರು ಪ್ರಸನ್ನರಾಗಿ ಬಿಟ್ಟರೆ ಯಾವರೂಪದಿಂದಲಾದರೂ ಪ್ರತ್ಯಕ್ಷರಾಗಿ ಬಂದು ಬ್ರಹ್ಮವಿದ್ಯೆಯನ್ನು ಹೇಳಿಕೊಡುತ್ತಾರೆ-ಎಂಬುದಕ್ಕೆ ಸತ್ಯಕಾಮನ ಕಥೆಯೇ ಉದಾಹರಣೆಯಾಗಿದೆ. ಆದರೂ ಅವನು ಆ ಉಪದೇಶಗಳನ್ನು ಮತ್ತೊಮ್ಮೆ ಗುರುಮುಖದಿಂದ ಕೇಳಿಯೇ ಗಟ್ಟಿಮಾಡಿಕೊಂಡದ್ದೇಕೆಂದರೆ : ಬ್ರಹ್ಮವಿದ್ಯೆಯು ಗುರುವಿನಿಂದಲೇ ಬಂದಲ್ಲಿ ಸಾಧುತಮವೆನಿಸುವದೆಂಬ ಸಂಪ್ರದಾಯವನ್ನು ಎತ್ತಿಹಿಡಿಯುವದಕ್ಕಾಗಿ- ಎಂದು ತಿಳಿಯಬೇಕು.

To.

Sri




M 414 Sri J. Sreenivasa
Murthy, No. 18, II Cross
Kodanda Rampuram
P.O. BANGALORE-3

Edited Printed & Published by H. S. Lakshminarasimha Murthy as Secretary for The Adhyatma Prakasha Karyalaya, At The Adhyatma Prakasha Press, Holenarsipur - 573211

6-12-1983.